## ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್. ಪದವಿಗಾಗಿ ಅರ್ಪಿಸಿದ ನಿಬಂಧ



# 'ಬದುಕು' ಕಾದಂಬರಿ - ಹೆಣ್ಣು ; ಒಂದು ಅಧ್ಯಯನ


**ಸಂಶೋಧನ ವಿದ್ಯಾರ್ಥಿ**

ನಾಗೇಶ. ಎನ್

**ಮಾರ್ಗದರ್ಶಕರು**

ಡಾ॥ ಪುಟ್ಟಸ್ವಾಮಿ ಕಲ್ಲುದೇವರಹಳ್ಳಿ ಎಂ.ಎ., ಪಿಎಚ್.ಡಿ

ಕನ್ನಡ ಪ್ರಾಧ್ಯಾಪಕರು, ಎಂ.ಇ.ಎಸ್. ಕಾಲೇಜು,

ಮಲ್ಲೇಶ್ವರಂ, ಬೆಂಗಳೂರು-೦೩



952





ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ

ಎಂ.ಪಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ

ನರಸಿಂಹರಾಜ ಕಾಲೋನಿ, ಬೆಂಗಳೂರು-೫೬೦೦೧೯

(ಹಂಪಿ ಕನ್ನಡ ವಿಶ್ವವಿದ್ಯಾಲಯದಿಂದ ಮಾನ್ಯತೆ ಪಡೆದಿರುವ ಸ್ನಾತಕೋತ್ತರ ಸಂಶೋಧನ ಕೇಂದ್ರ)

952

ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್. ಪದವಿಗಾಗಿ ಅರ್ಪಿಸಿದ ನಿಬಂಧ



# 'ಬದುಕು' ಕಾದಂಬರಿ - ಹೆಣ್ಣು ; ಒಂದು ಅಧ್ಯಯನ

ಸಂಶೋಧನ ವಿದ್ಯಾರ್ಥಿ
ನಾಗೇಶ. ಎನ್

ಮಾರ್ಗದರ್ಶಕರು
ಡಾ|| ಪುಟ್ಟಸ್ವಾಮಿ ಕಲ್ಲುದೇವರಹಳ್ಳಿ ಎಂ.ಎ., ಪಿಎಚ್.ಡಿ
ಕನ್ನಡ ಪ್ರಾಧ್ಯಾಪಕರು, ಎಂ.ಇ.ಎಸ್. ಕಾಲೇಜು,
ಮಲ್ಲೇಶ್ವರಂ, ಬೆಂಗಳೂರು-೦೩



ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ
ನರಸಿಂಹರಾಜ ಕಾಲೋನಿ, ಬೆಂಗಳೂರು-೫೬೦೦೧೯
(ಹಂಪಿ ಕನ್ನಡ ವಿಶ್ವವಿದ್ಯಾಲಯದಿಂದ ಮಾನ್ಯತೆ ಪಡೆದಿರುವ ಸ್ನಾತಕೋತ್ತರ ಸಂಶೋಧನ ಕೇಂದ್ರ)

## ಮಾರ್ಗದರ್ಶಕರ ದೃಢೀಕರಣ ಪತ್ರ

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನಾ ಕೇಂದ್ರ, ಬೆಂಗಳೂರು. ಈ ಮೂಲಕ ಹಂಪಿ ಕನ್ನಡ ವಿಶ್ವ ವಿದ್ಯಾಲಯಕ್ಕೆ ೨೦೧೧-೧೨ನೇ ಸಾಲಿನ ಎಂ.ಫಿಲ್. ಪದವಿಗಾಗಿ **'ಬದುಕು' ಕಾದಂಬರಿ-ಹೆಣ್ಣು ; ಒಂದು ಅಧ್ಯಯನ** ಎಂಬ ನಿಬಂಧವನ್ನು ನಾಗೇಶ. ಎನ್ ರವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ.

ಈ ನಿಬಂಧವು ಇವರು ಸ್ವಂತ ಬರವಣಿಗೆಯಾಗಿದ್ದು ಇದರ ಯಾವುದೇ ಭಾಗವನ್ನು ಬೇರೆಲ್ಲೂ ಪ್ರಕಟಿಸಿಲ್ಲ ಮತ್ತು ಬೇರೆ ಯಾವುದೇ ಪದವಿಗಾಗಿ ಸಲ್ಲಿಸಿಲ್ಲ ಎಂದು ಈ ಮೂಲಕ ದೃಢೀಕರಿಸುತ್ತೇನೆ.

ಸಹಿ

(ಡಾ. ಪುಟ್ಟಸ್ವಾಮಿ ಕಲುದೇವರಹಳ್ಳಿ)

ಮಾರ್ಗದರ್ಶಕರು

ಡಾ. ಪುಟ್ಟಸ್ವಾಮಿ ಕಲ್ಲು ದೇವರ ಹಳ್ಳಿ
ಕನ್ನಡ ವಿಭಾಗದ ಮುಖ್ಯಸ್ಥರು
ಎಂ.ಇ.ಎಸ್. ಕಾಲೇಜು
ಮಲ್ಲೇಶ್ವರಂ, ಬೆಂಗಳೂರು-560003

ದಿನಾಂಕ: ೨೫-೦೬-೨೦೧೨
ಸ್ಥಳ: ಬೆಂಗಳೂರು

# ಅಭ್ಯರ್ಥಿಯ ದೃಢೀಕರಣ ಪತ್ರ

ನಾಗೇಶ.ಎನ್ ಎಂಬ ನಾನು ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನಾ ಕೇಂದ್ರ, ಬೆಂಗಳೂರು. ಈ ಮೂಲಕ ಹಂಪಿ ವಿಶ್ವ ವಿದ್ಯಾಲಯಕ್ಕೆ ೨೦೧೧-೧೨ನೇ ಸಾಲಿನ ಎಂ.ಫಿಲ್. ಪದವಿಗಾಗಿ **'ಬದುಕು' ಕಾದಂಬರಿ-ಹೆಣ್ಣು ; ಒಂದು ಅಧ್ಯಯನ** ಎಂಬ ನಿಬಂಧವನ್ನು ಡಾ॥ ಪುಟ್ಟಸ್ವಾಮಿ ಕಲ್ಲುದೇವರಹಳ್ಳಿ, ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಸಲ್ಲಿಸುತ್ತಿದ್ದೇನೆ. ಈ ನಿಬಂಧವು ನನ್ನ ಸ್ವಂತ ಬರವಣಿಗೆಯಾಗಿದ್ದು ಇದರ ಯಾವುದೇ ಭಾಗವನ್ನು ಈವರೆಗೆ ಬೇರೆಲ್ಲೂ ಪ್ರಕಟಪಡಿಸಿಲ್ಲ ಮತ್ತು ಬೇರೆ ಯಾವುದೇ ಪದವಿಗಾಗಿ ಸಲ್ಲಿಸಿಲ್ಲ ಎಂದು ಈ ಮೂಲಕ ಧೃಡೀಕರಿಸುತ್ತೇನೆ.

ಸಹಿ

(ನಾಗೇಶ)

ಸಂಶೋಧನ ವಿದ್ಯಾರ್ಥಿ

ದಿನಾಂಕ: ೨೫-೦೬-೨೦೧೨

ಸ್ಥಳ: ಬೆಂಗಳೂರು

## 'ಬದುಕು' ಕಾದಂಬರಿ – ಹೆಣ್ಣು ; ಒಂದು ಅಧ್ಯಯನ

### ಪರಿವಿಡಿ

# ಅಧ್ಯಾಯ-೧

## ಅಧ್ಯಯನದ ಉದ್ದೇಶ ಸ್ವರೂಪ ಮತ್ತು ವ್ಯಾಪ್ತಿ

ಭಾರತ ದೇಶವು ಬಹಳಷ್ಟು ವಿಶಾಲವೂ, ವಿಸ್ತಾರವೂ ಆಗಿದ್ದು 'ವಿವಿಧತೆಯಲ್ಲಿ ಏಕತೆ ಅದುವೆ ಭಾರತದ ವಿಶಿಷ್ಟತೆ' ಎಂಬ ಘೋಷವಾಕ್ಯದ ಮೂಲಕ ನಿರ್ಮಾಣವಾಗಿದೆ. ಇಲ್ಲಿ ಸಾವಿರಾರು ಭಾಷೆಗಳು ಬಳಕೆಯಲ್ಲಿದ್ದು ಅವುಗಳಲ್ಲಿ ಹದಿನೆಂಟು ಭಾಷೆಗಳು ಮಾತ್ರ ಅಧಿಕೃತ ಭಾಷೆಗಳಾಗಿ ಮನ್ನಣೆ ಪಡೆದಿವೆ. ಅಂತಹ ಹದಿನೆಂಟು ಭಾಷೆಗಳಲ್ಲಿ ಕನ್ನಡವು ಕೂಡ ಒಂದಾಗಿದೆ.

ವಿಶ್ವ ಸಾಹಿತ್ಯದಲ್ಲಿ ಕನ್ನಡವು ತನ್ನ ಅಭಿಜಾತತೆಯಿಂದ ವಿಶಿಷ್ಟತೆಯನ್ನು ಮೆರೆದಿದೆ. ಜಗತ್ತಿನ ಆರು ಸಾವಿರ ಭಾಷೆಗಳಲ್ಲಿ ಇಪ್ಪತ್ತೇಳನೆಯ ಪುರಾತನ ಭಾಷೆಯಾದ ಕನ್ನಡ ಭಾಷೆಯು ವಿಪುಲ ಸಾಹಿತ್ಯ ಕೃಷಿಗೆ ಒಳಗಾಗಿರುವುದನ್ನು ಕಾಣಬಹುದಾಗಿದೆ. ಕನ್ನಡ ಭಾಷೆಯಲ್ಲಿ ಸಾಹಿತ್ಯ ಕೃಷಿಯು ಯಾವಾಗ ಪ್ರಾರಂಭವಾಯಿತು ಎಂಬುದಕ್ಕೆ ನಿರ್ದಿಷ್ಟವಾದ ಆಧಾರಗಳಿಲ್ಲ. ಆದರೂ 'ಕವಿರಾಜಮಾರ್ಗ' ಮೊದಲ ಉಪಲಬ್ಧ ಕನ್ನಡ ಕೃತಿಯಾಗಿರುವುದನ್ನು ಇಲ್ಲಿ ಸ್ಮರಿಸಬಹುದು. ಇಲ್ಲಿಂದ ಬೆಳೆದು ಬಂದ ಸಾಹಿತ್ಯದಲ್ಲಿ ಹೆಚ್ಚಾಗಿ ಇಣುಕುವ ಪಾತ್ರಗಳೆಂದರೆ 'ಹೆಣ್ಣು'. ಪುರಾತನ ಕಾಲದಿಂದಲೂ ಹೆಣ್ಣು ಹೇಗೆ ಬೆಳೆದುಕೊಂಡು ಬಂದಳು ಎಂಬುದನ್ನು ನಮ್ಮ ಕನ್ನಡ ಸಾಹಿತ್ಯವು ಬಿಂಬಿಸುತ್ತದೆ.

ಅನಾದಿ ಕಾಲದಲ್ಲಿ ಮಾನವನು ಗುಂಪು ಗುಂಪಾಗಿ ಜೀವಿಸುತ್ತಿದ್ದನು. ನಾಗರೀಕತೆಯ ಪೂರ್ವಯುಗದ ಆ ಕಾಲಘಟ್ಟದಲ್ಲಿ ಮಹಿಳೆಯು ತುಂಬಾ ಶಕ್ತಿಶಾಲಿಯೂ, ತೋಳ್ಬಲದೊಂದಿಗೆ ಭಾವನಾತ್ಮಕ ಸಂವೇದನಾ ಗುಣಗಳನ್ನು ಪಡೆದಿದ್ದಳು. ಇದರಿಂದ ಆಕೆಯೇ ಅಲ್ಲಿನ ಗುಂಪಿನ ನಾಯಕಿಯಾಗಿದ್ದಳು.

ಕಾಲಾಂತರದಲ್ಲಿಯೂ ಹೆಣ್ಣಿನಿಂದಲೇ ಕುಟುಂಬ ವ್ಯವಸ್ಥೆಯು ರೂಪುತಳೆಯ ತೊಡಗಿತು. ಮನೆಯ ಎಲ್ಲಾ ಜವಬ್ದಾರಿಗಳನ್ನು ತಾನೇ ಹೊತ್ತು ನಿಭಾಯಿಸುತ್ತಿದ್ದಳು. ಸಕಲ ಹೊಣೆಯನ್ನೂ ಹೊತ್ತ 'ಆಕೆಗೆ' ಯಜಮಾನಿಯ ಪಟ್ಟ ದೊರೆತು ಮಾತೃ ಪ್ರಧಾನ ಕುಟುಂಬಗಳು ಬೆಳೆಯಲಾರಂಭಿಸಿದವು. 'ಹೆಣ್ಣು ಕುಟುಂಬದ ಕಣ್ಣು' ಎಂಬಂತೆ ಪತಿಯನ್ನು ಸರಿದಾರಿಯಲ್ಲಿ ನಡೆಸುವ ಹಾಗೂ ಮಕ್ಕಳನ್ನು ಆರೈಕೆ ಮಾಡುವ ಕೆಲಸ ಅವಳದಾಗಿತ್ತು.

ಶಿಲಾಯುಗದಿಂದಲೂ ಹೆಣ್ಣು ಮುಖ್ಯ ಸ್ಥಾನದಲಿಯೇ ಇದ್ದಳು. ಕ್ರಮೇಣ ಗಂಡು ಆಕೆಯ ಮೇಲೆ ತನ್ನ ಪ್ರಾಬಲ್ಯವನ್ನು ಬೀರುವುದರ ಮೂಲಕ ಹೆಣ್ಣನ್ನು ಹೊರಜಗತ್ತಿನಿಂದ ದೂರವಿಟ್ಟು ಅಡಿಗೆ ಮನೆಗೆ ಮಾತ್ರ ಸೀಮಿತಪಡಿಸಿದ್ದನ್ನು ಕಾಣುತ್ತೇವೆ. ಇದು ನಿಮಿತ್ತವಾಗಿ ಆಕೆ ಸಾಮಾಜಿಕ ಬದುಕಿನಲ್ಲಿ-ಅಪಾತ್ರಳಾಗಿ, ಅಸಹಾಯಕಳಾಗಿ, ಅಸಮಾನತೆಯನ್ನು ಎದುರಿಸುವುದನ್ನು ಕಾಣುತ್ತೇವೆ.

ಇದರ ಪರಿಣಾಮವಾಗಿ ಮಾತೃ ಪ್ರಧಾನ ವ್ಯವಸ್ಥೆ ಇಲ್ಲವಾಗಿ ಪಿತೃ ಪ್ರಧಾನ ವ್ಯವಸ್ಥೆ ಜಾರಿಗೆ ಬಂದಿರಬಹುದು. ಹೀಗೆ ಆಕೆಯನ್ನು ಹೀನಾಯವಾಗಿ ನಡೆಸಿಕೊಂಡಿದ್ದರ ಪ್ರತಿಫಲವಾಗಿ ಸ್ತ್ರೀ-ಪುರುಷರ ಸಾಮಾಜಿಕ ಅಸಮಾನತೆಗೆ ಕಾರಣವಾಯಿತು.

ಕುಟುಂಬದ ಯಜಮಾನಿಕೆಯಲ್ಲಿ ಆದಂತಹ ಬದಲಾವಣೆಗಳಿಂದಾಗಿ ಹೆಣ್ಣಿನ ಸ್ಥಾನಮಾನಗಳು ಹೀನಾಯವಾದವು. ಇದನ್ನೇ ಸದಾವಕಾಶವೆಂಬಂತೆ ಕಾಯುತ್ತಿದ್ದ ಪುರುಷರ ಪ್ರಾಬಲ್ಯವು ಮತ್ತಷ್ಟು ಹೆಚ್ಚಾಗತೊಡಗಿತು. ಇದು ಹಲವಾರು ಕಾಲಘಟ್ಟಗಳಲ್ಲಿ ಬೇರೆ ಬೇರೆ ರೀತಿಯಲ್ಲಿ ಶೋಷಣೆಯನ್ನು ಪ್ರತಿನಿಧಿಸುತ್ತಲೇ ಬರುತ್ತಿತ್ತು.

ಮನುಷ್ಯ ಚರಿತ್ರೆಯಲ್ಲಿ ಅನಾದಿಕಾಲದಿಂದಲೂ ಮಾನವ ಕುಲದ ಒಂದು ವರ್ಗವನ್ನು ಇನೊಂದು ವರ್ಗ, ಒಂದು ಜಾತಿಯನ್ನು ಇನ್ನೊಂದು ಜಾತಿ, ಒಂದು ಧರ್ಮವನ್ನು ಇನ್ನೊಂದು ಧರ್ಮ, ಒಂದು ಲಿಂಗವನ್ನು ಇನ್ನೊಂದು ಲಿಂಗ ಶೋಷಿಸುತ್ತಾ ಬಂದಿದೆ. ಒಬ್ಬ ಮಾನವನನ್ನು ಇನ್ನೊಬ್ಬ ಮಾನವ, ಒಂದು ವರ್ಗವನ್ನು ಇನ್ನೊಂದು ವರ್ಗ, ಒಂದು ಧರ್ಮದವರನ್ನು ಇನ್ನೊಂದು ಧರ್ಮದವರು, ಒಂದು ಜಾತಿಯವರು ಇನ್ನೊಂದು ಜಾತಿಯವರನ್ನು, ಒಂದು ಲಿಂಗದವರನ್ನು ಇನ್ನೊಂದು ಲಿಂಗದವರು ಗುಲಾಮಗಿರಿಯಲ್ಲಿ ಮತ್ತು ಅವಲಂಬನೆಯ ಸ್ಥಿತಿಯಲ್ಲಿ ಇಡುವಂತಹ ಸಂಬಂಧಗಳೇ ಹೆಚ್ಚಾಗಿ ಹೆಣ್ಣು ಮತ್ತಷ್ಟು ಕೆಳಹಂತಕ್ಕೆ ಹೋಗಲು ಕಾರಣವಾಯಿತು.[೧]

ವೇದಗಳ ಕಾಲದಲ್ಲಿ ಹೆಣ್ಣಿನ ಚಿತ್ರಣವನ್ನು ನೋಡಿದರೆ ಪೂರ್ವವೇದದ ಕಾಲ ಘಟ್ಟದಲ್ಲಿ ಉತ್ತಮ ಸ್ಥಿತಿಯಲ್ಲಿ ಇದ್ದದನ್ನು ಕಾಣಬಹುದಾಗಿದೆ. ಋಗ್ವೇದ, ಯಜುರ್ವೇದ, ಸಾಮವೇದ ಮತ್ತು ಅಥರ್ವಣ ವೇದಗಳು ಧಾರ್ಮಿಕ ಗ್ರಂಥಗಳಾಗಿದ್ದರೂ ಕೂಡ ಇದರಲ್ಲಿ ಆ ಕಾಲದಲ್ಲಿ ಜರುಗಿರುವಂತಹ ಎಲ್ಲಾ ಸಾಮಾಜಿಕ ಚಿತ್ರಣವನ್ನು ಕಾಣಬಹುದಾಗಿದೆ. ಇದರಲ್ಲಿ ಸ್ತ್ರೀಯರ ಬಗೆಗಿನ ಅಂಶಗಳು ಇರುವುದರಿಂದ ಮಹಿಳೆಯರ ಸಾಮಾಜಿಕ ಸ್ಥಿತಿಗಳನ್ನು ಅರಿಯಲು ಸಹಾಯಕವಾಗಿದೆ. ಈ ಕಾಲದಲ್ಲಿ ಮಹಿಳೆ ಶಕ್ತಿ, ಔದಾರ್ಯ ಮತ್ತು ಸ್ವಾಂತತ್ರ್ಯದ ಪ್ರತೀಕವೂ ಆಗಿದ್ದಳು. ಸ್ತ್ರೀ-ಪುರುಷರ ಸಂಬಂಧಗಳಲ್ಲಿಯೂ ಕೂಡ ವಿಪರೀತವಾದಂತಹ ಕಟ್ಟು ಪಾಡುಗಳೇನು ಇರಲಿಲ್ಲವೆಂಬುದು ಸ್ಪಷ್ಟವಾಗುತ್ತದೆ.

ಹೀಗಿದ್ದಂತಹ ಪರಿಸ್ಥಿತಿಯು ಉತ್ತರ ವೇದದ ಕಾಲದಲ್ಲಿ ನಕಾರಾತ್ಮಕ ಧೋರಣೆ ಬೆಳೆಯಿತು. ಮಹಿಳೆಯರು ಒಂದಲ್ಲ ಒಂದು ವಿಧದ ದೌರ್ಜನ್ಯಕ್ಕೆ ತುತ್ತಾಗಿದ್ದರೆಂಬುದಕ್ಕೆ ಸೀತೆ, ದ್ರೌಪದಿಯರ ಕತೆಗಳೇ ಸಾಕ್ಷಿ. ಆದರೆ ವೇದಕಾಲದಲ್ಲಿ ಮಹಿಳೆಯರಿಗೆ ಕೆಲವೊಂದು ಹಕ್ಕುಗಳೂ ಇದ್ದವು ಎಂಬ ಮಾತನ್ನು ಅಲ್ಲಗೆಳೆಯುವಂತಿಲ್ಲ. ಕ್ರಿ.ಪೂ.೨೫೦೦ರಿಂದ

೧. ಹಾಲತಿ ಸೋಮಶೇಖರ: ಮಹಿಳಾ ಚಳುವಳಿ ಮತ್ತು ಸಾಂಸ್ಕೃತಿಕ ಹಿನ್ನಲೆ. ಪುಟ ಸಂಖ್ಯೆ: ೨೪. ವಿಸ್ಮಯ ಪ್ರಕಾಶನ ೨೦೦೭

ಕ್ರಿ.ಪೂ.೫೦೦ರ ವರೆಗಿನ ಅವಧಿಯಲ್ಲಿ ಎಂದರೆ ವೇದ ಕಾಲ ಹಾಗೂ ವೇದೋತ್ತರ ಕಾಲದ ಅವಧಿಯಲ್ಲಿ ಸ್ತ್ರೀಯರಿಗೆ ಬಹಳ ಅನುಕೂಲಕರ ವಾತಾವರಣವಿತ್ತು.[2] ಆದರೆ ಇದು ಕೊನೆಯವರೆಗೂ ಇದೇ ಸ್ಥಿತಿಯಲ್ಲಿ ಇರಲಿಲ್ಲ ಎನ್ನುವುದು ಕೂಡ ವಾಸ್ತವವಾಗಿತ್ತು.

ವೇದಗಳ ಕಾಲದಲ್ಲಿ ಕೆಲವೊಂದು ಆಚರಣೆಗಳು ಹೆಣ್ಣನ್ನು ಹೀನಾಯ ಸ್ಥಿತಿಗೆ ತಳ್ಳಲ್ಪಟ್ಟಿದ್ದವು. ಆದರೆ ಬೇರೆ ಕಾಲಗಳ ರೀತಿಯಲ್ಲಿ ಇರುವಷ್ಟು ಶೋಷಿತವಾಗಿರಲಿಲ್ಲ. ಈ ಯುಗದ ಕೊನೆ ಕೊನೆಯಲ್ಲಿ ಗಂಡಿಗೆ ಹೆಚ್ಚಿನ ಮಹತ್ವ ದೊರೆಯುತ್ತಾ ಬಂತು. ಕಾರಣ 'ಸುತನೇ ಸದ್ಗತಿಗೆ ದಾತನ್ಯೆ' ಎಂಬ ಮಾತು ಬಹಳಷ್ಟು ಪ್ರಚಲಿತವಾಗಿತ್ತು. ಇದರಿಂದ ಹೆಣ್ಣು ಮಕ್ಕಳು ಹುಟ್ಟುವುದು ದೌರ್ಭಾಗ್ಯವೆಂಬಂತಹ ಪರಿಸ್ಥಿತಿ ನಿರ್ಮಾಣವಾಯಿತು.

ವೇದಗಳ ಕೊನೆಕೊನೆಯ ಘಟ್ಟಗಳಲ್ಲಿ ಮಾತೃ ಪ್ರಾಧಾನ್ಯತೆ ಇದ್ದದ್ದು ಸ್ವಲ್ಪ ಸ್ವಲ್ಪವೇ ಕ್ಷೀಣಿಸುತ್ತಾ ಬಂದು ಆ ಜಾಗದಲ್ಲಿ ಪಿತೃ ಪ್ರಾಧ್ಯಾನ್ಯತೆ ಪ್ರಬಲವಾಯಿತು. ಇದರ ನಿಮಿತ್ತ ಹೆಣ್ಣಿಗೊಂದು ಧರ್ಮ, ಗಂಡಿಗೊಂದು ಧರ್ಮ ಎನ್ನುವಂತಾಯಿತು. ಅನ್ಯಜೀವನದ ಧರ್ಮ-ಕರ್ಮಗಳ ವಿಚಾರಗಳಲ್ಲೂ ಕೂಡ ಗಂಡಿನ ಆಯ್ಕೆಗೆ ಪ್ರಥಮ ಪ್ರಾಶಸ್ತ್ಯ ದೊರೆಯಿತು. ಇದರಿಂದ ಪುರುಷರು ದೇವಸಮಾನರು, ಅತಿಮಾನುಷ ಸಾಮರ್ಥ್ಯವುಳ್ಳವರು, ಉಗ್ರ ತಪಸ್ವಿಗಳೂ ಆಗಿದ್ದರೆ ಹೆಣ್ಣು ಮಾತ್ರ ಇವೆಲ್ಲವನ್ನು ಹೊಂದಿರುವ ಪುರುಷನ ನೆರಳಾಗಿಯೂ, ಗಂಡನಿಗೆ ದಾಸಿಯಾಗಿಯೂ, ಗಂಡನ ಆಜ್ಞಾಪಾಲಕಳಾಗಿಯೂ ಇದ್ದು ಗಂಡನೇ ಸಮಸ್ತವೂ ಎನ್ನುವಂತೆ ಬಾಳಬೇಕಾದ ಅನಿವಾರ್ಯಕ್ಕೆ ಒಳಗಾದಳು.

ರಾಮಾಯಣ, ಮಹಾಭಾರತ, ಪುರಾಣಗಳಲ್ಲಿ ಹೆಣ್ಣಿನ ಶೋಷಣೆ ನಡೆದಿರುವುದು ನಮ್ಮ ಕಣ್ಣು ಮುಂದೆಯೇ ಇದೆ. ಶತಶತಮಾನಗಳಿಂದಲೂ ಹೆಣ್ಣಿನ ಮಾನಾಪಹರಣ, ಬಹುಪತ್ನಿತ್ವ, ವನವಾಸ, ಗಾಂಧರ್ವವಿವಾಹ, ಅಗ್ನಿಪ್ರವೇಶ, ದಾಸಿ ಪದ್ಧತಿ, ಹೆಣ್ಣನ್ನು ಒತ್ತೆ ಇಡುವುದು ಹೀಗೆ ಒಂದಲ್ಲ ಒಂದು ಸಮಸ್ಯೆಗಳ ಸುಳಿಗೆ ಸಿಲುಕಿ ನರಳುತ್ತಾಳೆ. ನಮ್ಮ ಈ ಪುರಾಣ ಗ್ರಂಥಗಳಲ್ಲಿ ಶಿಕ್ಷೆಗೆ ಒಳಪಡಿಸುವ ವ್ಯಕ್ತಿಗಳು ಪೂಜ್ಯನೀಯವಾಗಿರುವುದು ಕಾಣುತ್ತಿದೆ. ರಾಮ, ಕೃಷ್ಣ, ಪಾಂಡವರು, ದುಷ್ಯಂತ, ಕೌರವರು ಅಂತಹವರಲ್ಲಿ ಪ್ರಮುಖರು.

ಇಂದ್ರನ ಐಹಿಕ ಸುಖವು ಒಂದು ತೆರನಾದರೆ, ಋಷಿಮುನಿಗಳ ದಾರಿ ಮತ್ತೊಂದು ರೀತಿಯಲ್ಲಿರುತ್ತದೆ. ತಪಸಿಗಳೆಂದೇ ಪ್ರಖ್ಯಾತವಾಗಿರುವ ಋಷಿ ಶ್ರೇಷ್ಠರಿಂದಲೂ ಕೂಡ ಹೆಣ್ಣು ಕಷ್ಟಗಳನ್ನು ಅನುಭವಿಸಿದ್ದನ್ನು ಕಾಣಬಹುದು. ತಮ್ಮ ಅಪಾರವಾದ ತಪೋ ಬಲದಿಂದ ತಪಸ್ಸನ್ನು ಆಚರಿಸಿ ಸಿದ್ಧಿಯನ್ನು ಪಡೆದ ಋಷಿಗಳು ಅನೇಕರು. ಇವರ ಇಚ್ಛೆಗೆ ವಿರುದ್ಧವಾಗಿ

---

೨. ಸಾ.ರಾ. ಅಬೂಬಕ್ಕರ್: ಸಾಹಿತ್ಯ ಸಂಸ್ಕೃತಿ ಮತ್ತು ಮಹಿಳೆ ಪುಟ ಸಂಖ್ಯೆ-೬೮ ಕನ್ನಡ ವಿಶ್ವ ವಿದ್ಯಾಲಯ-೨೦೦೭

ಏನಾದರು ನಡೆದರೆ ಅದಕ್ಕೆ ಕಾರಣರಾದವರ ಮೇಲೆ ಶಾಪವನ್ನು ಹಾಕುತ್ತಾರೆ. ಕೆಲವೊಮ್ಮೆ ಸಣ್ಣ ಪುಟ್ಟ ವಿಷಯಗಳಿಗೂ ತಾಳ್ಮೆಯನ್ನು ಕಳೆದುಕೊಳ್ಳುವುದುಂಟು. ಸಂಯಮವನ್ನು ಮೆರೆಯಬೇಕಾದ ಇವರುಗಳೇ ಹೆಣ್ಣಿನ ಮೇಲೆ ಪೌರುಷವನ್ನು ತೋರುತ್ತಾರೆ. ಹೆಂಡತಿಯನ್ನೇ ಕೊಲ್ಲಿಸಿದ ಜಮದಗ್ನಿ, ಇಂದ್ರ, ವಿಶ್ವಾಮಿತ್ರ, ಗೌತಮಮಹರ್ಷಿ ಮೊದಲಾದವರು ತಮ್ಮ ಕೋಪವನ್ನು ಹೆಂಡತಿಯರ ಮೇಲೆ ತೀರಿಸಿಕೊಂಡಿದ್ದುಂಟು. ಸಾತ್ವಿಕ ವರ್ಗವೂ ಸಹ ಹೆಣ್ಣನ್ನು ಶೋಷಣೆಗೊಳಗಾಗಿಸಿದ್ದು ದುರಂತವೇ ಸರಿ.

ವೇದಗಳ ನಂತರ ಸ್ಮೃತಿಗಳ ಕಾಲದಲ್ಲಿ ಹೆಣ್ಣಿಗೆ ಅತ್ಯಂತ ನಿಕೃಷ್ಟ ಕಾಲ ಒದಗಿ ಬಂದಿತು. ಮನು ತನ್ನ ಧರ್ಮ ಶಾಸ್ತ್ರದಲ್ಲಿ ಹೆಣ್ಣಿನ ಬಗೆಗೆ ದ್ವಂದ್ವ ಅಭಿಪ್ರಾಯಗಳನ್ನು ಮೂಡಿಸಿದ್ದಾನೆ. 'ಯತ್ರ ನಾರ್ಯಸ್ತು ಪೂಜ್ಯಂತೇ ರಮಂತೆ ತತ್ರ ದೇವತಾಃ' ಎಂದು ಮನು ಒಂದು ಕಡೆ ಹೇಳಿದ್ದಾನೆ. ಎಲ್ಲಿ ಹೆಣ್ಣಿಗೆ ಪೂಜೆ ಸಲ್ಲುತ್ತದೆಯೊ ಅಲ್ಲಿ ದೇವತೆಗಳು ವಿಹರಿಸುತ್ತಾರೆ ಎನ್ನುವ ಅರ್ಥದಲ್ಲಿ ಹೊಳೆಯುವ ಈ ಶ್ಲೋಕ ಹೆಣ್ಣಿನ ಪೂಜ್ಯ ಸ್ಥಾನವನ್ನು ಪರಿಚಯಿಸುತ್ತದೆ. ಯಾವ ಸಮಾಜ ಹೆಣ್ಣನ್ನು ಗೌರವದಿಂದ ಪೂಜನೀಯ ದೃಷ್ಟಿಯಿಂದ ನೋಡುವುದೊ ಆ ಸಮಾಜದಲ್ಲಿ ದೇವತೆಗಳು ವಿಹರಿಸುತ್ತಾರೆ ಎನ್ನುವ ಮಾತುಗಳು ಪೂರ್ಣಸ್ಯ ಸತ್ಯವಾದುದು. ಆದರೆ ಅದೇ ಮನುಧರ್ಮಶಾಸ್ತ್ರ 'ನ ಸ್ತ್ರೀ ಸ್ವಾತಂತ್ರ್ಯ ಮರ್ಹತಿ' ಎಂದು ಹೇಳುವುದರ ಮೂಲಕ ಸ್ತ್ರೀ ಸ್ವಾತಂತ್ರ್ಯದ ಮೇಲೆ ಹಲ್ಲೆ ನಡೆಸಿದೆ ಎಂತಲೇ ಹೇಳಬಹುದು.

ಹೆಣ್ಣು ಮಗುವಿಗೆ ಇನ್ನೂ ಲಜ್ಜೆ ಮೂಡದೆ, ಬೆತ್ತಲೆ ತಿರುಗುವ ಹಂತದಲ್ಲೇ ಮದುವೆ ಮಾಡಬೇಕೆಂದು ಮನು ಧರ್ಮಶಾಸ್ತ್ರ ನುಡಿಯುತ್ತದೆ. ದೇವ ಪೂಜೆ ಮಾಡ ಬಾರದೆಂದು ವಿಧಿಸುತ್ತದೆ. ವೇದ ಮಂತ್ರ ಪಠಿಸಬಾರದೆಂದು, ವೇದವನ್ನು ಓದಬಾರದೆಂದು ಅಪ್ಪಣೆ ಮಾಡಿದೆ. ಯಜ್ಞೋಪವೀತ ಧರಿಸಿ ಯಜ್ಞಯಾಗಾದಿಗಳನ್ನು ನೆರವೇರಿಸುವ, ಯಜಮಾನಿಕೆ ವಹಿಸುವ ಅಧಿಕಾರದ ವಿದ್ವತ್ತನ್ನು ಗಳಿಸಿದ್ದ ಸ್ತ್ರೀಗೆ, ವೇದ ಮಂತ್ರಗಳನ್ನು ಕಿವಿಗಿಳಿಂದ ಕೇಳಲೂಬಾರದೆಂಬ ಕಟ್ಟು ನಿಟ್ಟಾದ ನಿಯಮ ಮಾಡಿ ಮಹಿಳೆಯ ಸಾಮಾಜಿಕ ಅಂತಸ್ತನ್ನು ಕೆಳಗಿಳಿಸಿದ್ದು ಮಾತ್ರವಲ್ಲದೆ ಆಕೆಯ ಸ್ವಾತಂತ್ರ್ಯವನ್ನು ಸಂಪೂರ್ಣವಾಗಿ ಕಸಿದುಕೊಳ್ಳಲಾಯಿತು.[೩]

ಜೈನ ಧರ್ಮದತ್ತ ದೃಷ್ಟಿ ಹಾಯಿಸಿದಾಗ ಅಲ್ಲಿ ಪುರುಷನ ಶ್ರೇಷ್ಠತೆಯನ್ನು ಪ್ರತಿಪಾದಿಸಲಾಗುತ್ತದೆ. ಹೆಣ್ಣು ಹೀನ ಸ್ಥಿತಿಗೆ, ಅಪಮಾನಕ್ಕೆ ಒಳಗಾಗುತ್ತಾಳೆ. ಆಕೆ ನಿತ್ಯ ಬದುಕಿನ ಭೋಗಕ್ಕೆ ಇರುವವಳು, ಅವಳನ್ನು ನೋಡಿದರೆ ಮನಸ್ಸು ಚಂಚಲವಾಗುವುದು.

---

೩. ಡಾ. ಕಮಲಾ ಹಂಪನಾ: ಬೊಗಸೆ (ಮಹಿಳೆ ಸುತ್ತ-ಮುತ್ತ) ಪುಟ ಸಂಖ್ಯೆ: ೧೩೩: ಸಿ.ವಿ.ಜಿ. ಪ್ರಕಟಣೆ-೨೦೦೩

ಆದುದರಿಂದ ಆಕೆ ವೈರಾಗ್ಯಕ್ಕೆ, ಧ್ಯಾನಕ್ಕೆ ಭಂಗ ತರುತ್ತಾಳೆ ಎಂದು ಸಾರುತ್ತದೆ. ಇಲ್ಲಿಯೂ ಕೂಡ ಮಹಿಳೆ ಮಾನಸಿಕ ಖಿನ್ನತೆ, ಕೀಳರಿಮೆಯಲ್ಲಿ ಬದುಕು ಸವೆಸಬೇಕಾದ ಅನಿವಾರ್ಯತೆ ಇದೆ.

ಬೌದ್ಧಧರ್ಮವು ಸ್ತ್ರೀಯರಿಗೆ ಕೆಲವು ಧಾರ್ಮಿಕ ಸ್ವಾತಂತ್ರ್ಯಗಳನ್ನು ನೀಡಿತ್ತು. ಆದರೆ ಹೆಣ್ಣು ಇದ್ದರೆ ಮೋಕ್ಷ ಸಾಧನೆಗೆ, ಮಹಾನಿರ್ವಾಣವನ್ನು ಪಡೆಯಲು ಇವರು ಅಡ್ಡಿಯಾಗುತ್ತಾರೆ ಎಂಬಂತಹ ನಂಬಿಕೆಗಳು ಇದ್ದವು ಮಹಿಳೆಯರು ಲೌಕಿಕ ಸುಖವನ್ನು ತ್ಯಾಗ ಮಾಡಿ ಸನ್ಯಾಸವನ್ನು ಸ್ವೀಕರಿಸಿದ್ದರೂ ಸಹ ತುಚ್ಛವಾಗಿ ನೋಡುತ್ತಿದ್ದರು. ಅವರ ಸದ್ಗುಣಗಳಿಗಿಂತ ದೌರ್ಬಲ್ಯಗಳಿಗೇ ಹೆಚ್ಚಿನ ಒತ್ತನ್ನು ನೀಡಿ ಕಡೆಗಣಿಸುತ್ತಿದ್ದರು.

ಧರ್ಮದ ಹೆಸರಿನಲ್ಲಿ ಹೆಣ್ಣು ಬಹಳಷ್ಟು ಅನ್ಯಾಯ ಮತ್ತು ಶೋಷಣೆಗೆ ಒಳಗಾಗುತ್ತಿರುವ ಧರ್ಮವೆಂದರೆ ಮುಸ್ಲಿಂ ಧರ್ಮ ಆಕೆ ಮಸೀದಿ ಒಳಗಡೆ ಹೋಗಲೂ ಕೂಡ ಅವಕಾಶವಿಲ್ಲವೆಂದರೆ ಆಕೆಯ ಸ್ಥಾನಮಾನಗಳು ಏನು ಎಂಬುದರ ಅರಿವಾಗುತ್ತದೆ. ಸಾಂಸಾರಿಕ ಸೆಳೆತಕ್ಕೆ ಸಿಕ್ಕಿ ಒದ್ದಾಡುವ ಹೆಣ್ಣು ಅಲ್ಲಿ ಕನಿಷ್ಠ ಪಕ್ಷ ವಿಚ್ಛೇದಿತಳಾದಾಗ ಜೀವನಾಂಶವನ್ನು ಕೂಡ ಪಡೆಯಲಾಗದ ಚಿತ್ರಣವು ಮನಕಲಕುತ್ತದೆ.

'ವಿಚ್ಛೇದಿತ ಮಹಿಳೆಗೆ ಜೀವನಾಂಶ ನೀಡುವುದು ಧರ್ಮ ವಿರೋಧಿ ಎಂದು ಕೂಗೆಬ್ಬಿಸಿದ ಪುರುಷ ಪ್ರಧಾನ ಸಮಾಜವೂ ಇಂತಹ ಕೆಟ್ಟ ನಿಯಮವೂ ಕೂಡ ಧರ್ಮ ವಿರೋಧಿ ಎಂದೂ, ತಮ್ಮ ವ್ಯಕ್ತಿನಿಯಮವನ್ನು ಕುರಾನಿಗನುಸಾರವಾಗಿ ಬದಲಾಯಿಸಬೇಕೆಂದು ಒಮ್ಮೆಯಾದರೂ ಉಸಿರೆತ್ತಲಿಲ್ಲ.[೪] ಧರ್ಮಾಂಧರಾದ, ಮೂಲ ಭೂತವಾದಿಗಳಾದ ಇವರು ಕುಟುಂಬ ಯೋಜನೆ ಕೈಗೊಳ್ಳುವುದನ್ನು ವಿರೋಧಿಸುತ್ತಾರೆ. ಜೊತೆಗೆ ಭಾರತದ ಸಂವಿಧಾನದ ದಂಡಸಂಹಿತೆಗಳನ್ನು ವಿರೋಧಿಸುತ್ತಾರೆ ಎನ್ನುವುದು ವಾಸ್ತವವಾಗಿದೆ.

ಕ್ರೈಸ್ತ ಧರ್ಮವು ಸ್ತ್ರೀಯರ ವಿಷಯದಲ್ಲಿ ವಿಶಾಲ ಭಾವನೆಯನ್ನು ಹೊಂದಿದಂತೆ ತೋರುತ್ತಿದ್ದರೂ ಕೂಡ ಅಲ್ಲಿಯೂ ಯಾವುದೇ ವ್ಯತ್ಯಾಸ ತೋರುವುದಿಲ್ಲ. ಬೈಬಲ್ಲಿನ ಆದಿಕಾಂಡದಲ್ಲಿ ದೇವರು ಮೊದಲು 'ಆದಾಮ'ನನ್ನೂ ಸೃಷ್ಟಿಸಿದ ಎಂದು ಹೇಳುತ್ತದೆ. ಅವನು ತನ್ನ ಎಲುಬಿನಿಂದ ಹೆಣ್ಣನ್ನು ರೂಪಿಸಿಕೊಳ್ಳುತ್ತಾನೆ ಎಂದು ಸಾರುವಲ್ಲಿಯೇ ಪುರುಷ ಶ್ರೇಷ್ಠತೆಯನ್ನು ಸಾರುತ್ತದೆ. ಬೈಬಲ್ಲಿನ ಮತ್ತೊಂದು ಭಾಗದಲ್ಲಿ ಸ್ತ್ರೀಯನ್ನು ಪಾಪದ ಮೂಲವೆಂದು ಹೇಳುತ್ತದೆ. ಹೀಗಾಗಿ ಕ್ರೈಸ್ತ ಧರ್ಮವೂ ಕೂಡ ಸ್ತ್ರೀಯರ ವಿಷಯದಲ್ಲಿ ಸಾಮಾಜಿಕವಾಗಿ ಧಾರ್ಮಿಕವಾಗಿ ಅಸಮಾನತೆ ವ್ಯಕ್ತಪಡಿಸುವುದನ್ನು ಕಾಣುತ್ತೇವೆ.

---

೪. ಸಾ.ರಾ. ಅಬೂಬಕ್ಕರ್–'ಸಾಹಿತ್ಯ ಸಂಸ್ಕೃತಿ ಮತ್ತು ಮಹಿಳೆ'–ಪುಟ ಸಂಖ್ಯೆ ೭೫ ಕನ್ನಡ ವಿಶ್ವವಿದ್ಯಾಲಯ–೨೦೦೭

ಒಟ್ಟಾರೆಯಾಗಿ ಜಗತ್ತಿನ ಎಲ್ಲ ಮತಧರ್ಮಗಳು ಪುರುಷ ಪಕ್ಷಪಾತಿಯಾಗಿರುವುದು ಸುಸ್ಪಷ್ಟ. ಸ್ತ್ರೀ ವಿರೋಧಿ ಧೋರಣೆಗಳು ಸರ್ವೇ ಸಾಮಾನ್ಯವಾಗಿವೆ. ಮೂಲತಃ ಧರ್ಮ ಆ ಕೆಲಸವನ್ನು ಮಾಡದಿದ್ದರೂ ಅಲ್ಲಿನ ಧರ್ಮ ಸಂಸ್ಥಾಪಕರು ಸಾರಿರುವ ವಿಷಯಗಳನ್ನು ಬೇರೆ ರೀತಿಯಲ್ಲಿ ಅರ್ಥೈಸಿಕೊಂಡ ಪಟ್ಟಭದ್ರ ಹಿತಾಸಕ್ತಿಯು ತಮ್ಮ ಅನುಕೂಲಕ್ಕೆ ತಕ್ಕಂತೆ ದುರುಪಯೋಗಪಡಿಸಿಕೊಂಡಿದ್ದು ಸರ್ವವೇದ್ಯ ಪ್ರಸ್ತುತ ವಿಶ್ವಮಾನವತೆಯೆಡೆಗೆ ದಾರಿ ತೋರುವ ಸಮಾನತೆಯನ್ನು ಸಾರುವಂತಹ ಧರ್ಮದ ಅವಶ್ಯಕತೆ ಇದೆ.

ಮಧ್ಯಕಾಲಿನ ಯುಗದ ಚರಿತ್ರೆಯತ್ತ ದೃಷ್ಟಿ ಹಾಯಿಸಿದಾಗ ರಾಜಪ್ರಭುತ್ವವು ಹೆಣ್ಣನ್ನು ಮತ್ತಷ್ಟು ಕೀಳಾಗಿ ಕಂಡ ಪ್ರಸಂಗಗಳು, ಕರುಣಾ ಜನಕ ಪುಟಗಳು ಮೂಡಿ ಬಂದಿವೆ. ಅಲ್ಲಿ ದಾಸಿಯರಾಗಿ ಸೇವೆಯನ್ನು ಮಾಡಿ ತನ್ನ ಅಸ್ಥಿತ್ವವನ್ನು ಕಳೆದುಕೊಂಡಳು. ಆ ಕಾಲದಲ್ಲಿ 'ಹೆಣ್ಣು ಮಗು ಹುಟ್ಟಿದರೆ ಅದೊಂದು ಅಶುಭ ಎಂಬುದಾಗಿ ಭಾವಿಸತೊಡಗಿದ್ದು "ನಮಗೆ ಹೆಣ್ಣು ಶಿಶು ಹುಟ್ಟಿದ ದಿನ ಒಂದು ಶಾಪದ ದಿನ" ಎಂದು ಮಧ್ಯಯುಗದ ಪುರುಷರು ಹೇಳುತ್ತಿದ್ದರು. ಪತ್ನಿಯಾದವಳು ಅವಳ ದುರ್ದೈವದಿಂದ ಒಂದರ ಮೇಲೆ ಒಂದರಂತೆ ಹೆಣ್ಣು ಮಕ್ಕಳಿಗೆ ಜನ್ಮವಿತ್ತರೆ ಅವಳನ್ನು ನಿಂದಿಸಲಾಗುತ್ತಿತ್ತು. ಅದೇ ಕಾರಣಕ್ಕೆ ಕೆಲವು ಸಲ ಅವಳೊಂದಿಗಿನ ವಿವಾಹವನ್ನು ವಿಚ್ಛೇದನಗೊಳಿಸಲಾಗುತ್ತಿತ್ತು. ಹೆಣ್ಣು ಮಕ್ಕಳನ್ನು ಹುಟ್ಟಿದ ಕೂಡಲೆ ಸಾಯಿಸಿಬಿಡುವ ಪದ್ಧತಿಯನ್ನು ಅನುಸರಿಸುತ್ತಿದ್ದರು.[೫] ಹೀಗೆ ಹೆಣ್ಣು ಪುರಾತನ ಕಾಲದಿಂದಲೂ ಸ್ವಲ್ಪ ವ್ಯತ್ಯಾಸಗಳೊಂದಿಗೆ ತುಳಿತಕ್ಕೆ ಒಳಗಾಗಿಯೇ ಬಂದಿದ್ದಾಳೆ. ಕನಿಷ್ಟ ಪಕ್ಷ ಇಂದಿನ ಸಮಾಜಕ್ಕಾದರೂ ಹುಟ್ಟುವ ಮಗು ಗಂಡೋ? ಅಥವಾ ಹೆಣ್ಣೋ? ಎಂಬುದು ನಿರ್ಧಾರವಾಗುವುದು ಪುರುಷನಿಂದಲೇ ಹೊರತು ಹೆಣ್ಣಿನಿಂದಲ್ಲ ಎಂಬ ವಾಸ್ತವ ಹಾಗೂ ವೈಜ್ಞಾನಿಕ ಸಂಗತಿಯನ್ನು ಮನದಟ್ಟು ಮಾಡಬೇಕಾದ ಅನಿವಾರ್ಯತೆ ಇದೆ.

ಹೊಸ ಶತಮಾನಕ್ಕೆ ಕಾಲಿಟ್ಟ ಹೆಣ್ಣು ಇಂದು ಸಂಘರ್ಷ-ಸಮಾಧಾನಗಳಲ್ಲಿ ಇದ್ದಾಳೆ. ಎಲ್ಲಾ ರಂಗದಲ್ಲೂ ಮಿಂಚುತ್ತಿದ್ದಾಳೆ. ಸಾಹಿತ್ಯ ಕ್ಷೇತ್ರದಲ್ಲೂ ಮುಂಚೂಣಿಯಲ್ಲಿದ್ದು ತನ್ನ ಜೀವನವನ್ನು ಕೃತಿ ರೂಪಕ್ಕೆ ಇಳಿಸುತ್ತಿದ್ದಾಳೆ.

ಕನ್ನಡ ಸಾರಸ್ವತ ಲೋಕದ ಬಹುತೇಕ ಕಾದಂಬರಿಗಳ ಮುಖ್ಯ ವಸ್ತು 'ಹೆಣ್ಣು'. ಹಾಗೆ ನೋಡಿದರೆ ಕನ್ನಡದ ಪ್ರಥಮ ಕಾದಂಬರಿಯಾದ ಕೆರೂರು ವಾಸುದೇವಾಚಾರ್ಯರ 'ಇಂದಿರಾ', ನಂತರದ ಗುಲ್ವಾಡಿ ವೆಂಕಟರಾವ್‌ರವರ 'ಇಂದಿರಾಬಾಯಿ' ಕಾದಂಬರಿಗಳು ಸಮಾಜದ ಕಟ್ಟುಪಾಡುಗಳ ನಡುವೆ ಸಿಲುಕಿ ನರಳುವ ಹೆಣ್ಣಿನ ನೋವಿನ ಕಥೆಯನ್ನು ಬಿಂಬಿಸುತ್ತವೆ. ವಿಶೇಷವೆಂದರೆ ಈ ಕಾದಂಬರಿಗಳು ಹೆಣ್ಣಿನ ಶೋಷಣೆಯ ಮೇಲ್ಪದರವನ್ನಷ್ಟೇ ಬಿಂಬಿಸಿದ್ದು, ಹೆಣ್ಣಿನ ಆಂತರ್ಯವನ್ನು ಕಟ್ಟಿಕೊಡುವಲ್ಲಿ ವಿಫಲವಾಗಿವೆ.

---

೫. ಹಾಲತಿ ಸೋಮಶೇಖರ-ಮಹಿಳಾ ಚಳುವಳಿ ಸಾಮಾಜಿಕ ಮತ್ತು ಸಾಂಸ್ಕೃತಿಕ ಹಿನ್ನಲೆ : ಪುಟ ಸಂಖ್ಯೆ - ೧೪೪, ವಿಸ್ಮಯ ಪ್ರಕಾಶನ-೨೦೦೬

ಕಾರಣ ಪುರುಷ ಗ್ರಹಿಕೆಯೇ ಆ ಬಗೆಯದು. ತಮ್ಮ ಬದುಕನ್ನು ಕಟ್ಟಿಕೊಡುವಲ್ಲಿ ಆಯಾ ಮೂಲದಿಂದ ಬಂದವರೇ ಹೇಳಿದರೆ ಅದಕ್ಕೊಂದು ವಿಶಿಷ್ಟತೆ ಬರುತ್ತದೆ ಮಾತ್ರವಲ್ಲ. ಅಧಿಕೃತತೆ ಸಿಗುತ್ತದೆ. ಹೀಗಾಗಿ ಹೆಣ್ಣಿನ ಸಮಸ್ಯೆಯ ಮೂಲವನ್ನು ಹೆಣ್ಣು ಕಟ್ಟಿಕೊಟ್ಟರೆ ಅದು ಹೆಚ್ಚು ವಸ್ತುನಿಷ್ಠತೆಗೆ ಹತ್ತಿರವಾಗುತ್ತದೆ. ಮಹಿಳಾ ಬರಹಗಾರರನೇಕರು ಸಾಹಿತ್ಯ ಕೃಷಿಯಲ್ಲಿ ದುಡಿಸಿಕೊಂಡಿದ್ದಾರೆ. ಎಂ.ಕೆ.ಇಂದಿರಾ, ಅನುಪಮ ನಿರಂಜನ, ತ್ರಿವೇಣಿ, ಸಾಯಿಸುತೆ ಮುಂತಾದ ಸ್ತ್ರೀ ಕಾದಂಬರಿಕಾರರನ್ನು ಇಲ್ಲಿ ಸ್ಮರಿಸಬಹುದು.

ವಚನಕಾರರ ಯುಗದಲ್ಲಿ ನೋಡುವುದಾದರೆ 'ಹೆಣ್ಣು ಮಾಯೆ ಎಂಬುರು ಹೆಣ್ಣು ಮಾಯೆಯಲ್ಲ, ಮನದ ಮಂದಣ ಆಸೆಯೇ ಮಾಯೆ' ಎಂದು ಹೇಳಿ ಹೆಣ್ಣಿನ ಸ್ಥಾನಮಾನವನ್ನು ಏರಿಸಿದ್ದರು.

ಭಕ್ತೆಯಾದ ಬಳಿಕ ಹೆಣ್ಣಿಗೆ ಭವಿತನವಿಲ್ಲ
ಭವಿಯ ಮನೆಯಲ್ಲಿ ಭವಿಪಾಕವಲ್ಲದೆ
ಭಕ್ತನ ಮನೆಯಲ್ಲಿ ಭವಿಪಾಕವಿಲ್ಲ.[೬]

ಎಂದು ಹೆಣ್ಣನ್ನು ದೈವತ್ವದ ಸ್ಥಾನಕ್ಕೆ ಏರಿಸುವುದನ್ನು ಕಾಣಬಹುದು.

ಹನ್ನೆರಡನೇ ಶತಮಾನದಲ್ಲಾದ ಸಾಮಾಜಿಕ ಕ್ರಾಂತಿಯ ಬದಲಾವಣೆಯ ಗಾಳಿ ಯಾವುದೇ ಸ್ಥಿತ್ಯಂತರಕ್ಕೆ ಕಾರಣೀಭೂತವಾಗದೇ ಅಂದು ಇದ್ದಂತಹ ಕಟ್ಟುಪಾಡುಗಳೇ ಈಗಲೂ ಮುಂದುವರೆಯುತ್ತಿದ್ದು ಶತಮಾನಗಳು ಗತಿಸಿದ ಹಾಗೇ ಬೌದ್ಧಿಕವಾಗಿ, ವೈಚಾರಿಕವಾಗಿ ವಿಚಾರವಾಗುತ್ತಿರುವ ಹಿನ್ನೆಲೆಯಲ್ಲಿ ಅಲ್ಪಸ್ವಲ್ಪ ಬದಲಾವಣೆಯನ್ನು ಕಾಣಬಹುದಾಗಿದೆ. ಅಂದು ಶರಣರು ವ್ಯಕ್ತಪಡಿಸಿದ್ದ ಲಿಂಗ ಸಮಾನತೆಯ ಮಾನವೀಯ ಕಾಳಜಿ ಸ್ತ್ರೀ ವಿಮೋಚನೆಯ ನೆಲೆಯಲ್ಲಿ ಬೀಸಿದ ಪ್ರಥಮ ತಂಗಾಳಿಯಾಗಿದೆ.

ಮಹಿಳೆಯರು ಇಂದು ಎದುರಿಸುತ್ತಿರುವ ಎಲ್ಲಾ ಸಮಸ್ಯೆಗಳು ಸಾಹಿತ್ಯದಲ್ಲಿ ಬಿಂಬಿತವಾಗಿಲ್ಲ. ಮಹಿಳೆಯು ಒಂದು ಚೌಕಟ್ಟಿನೊಳಗಡೆ ಇದ್ದು ತನ್ನ ಸ್ಥಾನ ಮಾನಗಳನ್ನು ಅರಿತು ಆ ಚೌಕಟ್ಟಿಗನುಸಾರವಾಗಿಯೇ ಬದುಕಿ ಬಾಳಬೇಕಾಗುತ್ತದೆ.

ಸಾಹಿತ್ಯದಲ್ಲಿ ಹೆಣ್ಣನ್ನು ಹೇಗೆ ಬೇಕಾದರೂ ಚಿತ್ರಿಸಬಹುದು ಸಮಾಜದೊಡನೆ ಪ್ರಶ್ನೆ ಕೇಳುವುದರ ಮೂಲಕ ಸಮಾಜವನ್ನು ಬಡಿದೆಬ್ಬಿಸಬಹುದು ಸಾಹಿತ್ಯದ ಮೂಲಕ ಸಾಮಾಜಿಕ ಬದಲಾವಣೆಗೆ ಪ್ರಯತ್ನಿಸಬಹುದು. ಹೀಗಿದ್ದರೂ ಪಿತೃ ಪ್ರಧಾನ ವ್ಯವಸ್ಥೆಯ ಎಲ್ಲಾ ಕಾಲ ಘಟ್ಟಗಳಲ್ಲಿ ಮಹಿಳೆ ಎರಡನೆಯ ದರ್ಜೆಯವಳಾಗಿಯೇ ಗುರುತಿಸಲ್ಪಟ್ಟವಳು. ಆಯಾಯ

---

೬. ಡಾ. ಕಮಲಾ ಹಂಪನಾ: ಬೊಗಸೆ (ಮಹಿಳೆ ಸುತ್ತ-ಮುತ್ತ) ಪುಟ ಸಂಖ್ಯೆ: ೧೩೬: ಸಿ.ವಿ.ಜಿ. ಪ್ರಕಟಣೆ-೨೦೦೩

ಕಾಲದಲ್ಲಿ ಹೆಣ್ಣು ಎಂತಹ ಸ್ಥಾನ ಮಾನ, ಗೌರವಗಳನ್ನು ಪಡೆದು ಮೇಲ್‌ಸ್ತರಕ್ಕೆ ಬೆಳೆದರೂ ಕೂಡ ಹೆಣ್ಣು ಎಂಬ ಕಾರಣಕ್ಕೆ ಆಕೆ ಪುರುಷನ ಮಿತಿಗಳಲ್ಲೇ ಬೆಳೆಯಬೇಕಾದ ಅನಿವಾರ್ಯ ಪರಿಸ್ಥಿತಿಯನ್ನು ನಿರ್ಮಾಣ ಮಾಡಲಾಗಿದೆ.

ಗೀತಾ ನಾಗಭೂಷಣ್‌ರವರು ಕನ್ನಡದ ಪ್ರಸಿದ್ಧ ಬರಹಗಾರ್ತಿಯರಲ್ಲೊಬ್ಬರು. ಅವರ ಪ್ರಸಿದ್ದ 'ಬದುಕು' ಕಾದಂಬರಿಯು ಉತ್ತರ ಕರ್ನಾಟಕ ಸೊಗಡಿನ ವಿಭಿನ್ನ ಭಾಷೆ, ವಸ್ತುವಿನಿಂದ ಗಮನ ಸೆಳೆಯುತ್ತದೆ. ಬದುಕು ಕಾದಂಬರಿಯು ಹೆಣ್ಣಿನ ಅಂತರಂಗದ ನೋವು, ಪುರುಷ ಪ್ರಧಾನ ವ್ಯವಸ್ಥೆಯ ವಕ್ರದೃಷ್ಟಿ, ಅದರಲ್ಲೂ ದಲಿತ ಹೆಣ್ಣನ್ನು ಕಾಲ ಕಸಕ್ಕಿಂತಲೂ ಕಡೆಯಾಗಿ ಕಾಣುವ ಮೇಲ್ವರ್ಗದ ಶೋಷಣೆ, ಮೂಢನಂಬಿಕೆಯ ಹೆಸರಿನಲ್ಲಿ ದಲಿತ ಹೆಣ್ಣಿನ ಶೀಲದೊಡನೆ ಚಕ್ಕಂದವಾಡುವುದು ಇಂತಹ ಹಲವು ಸೂಕ್ಷ್ಮಗಳಿಗೆ ಈ ಕಾದಂಬರಿ ಕನ್ನಡಿ ರೂಪವಾಗಿರುವುದನ್ನು ಅಧ್ಯಯನ ಮಾಡುವುದು ಈ ಸಂಶೋಧನಾ ಪ್ರಬಂಧದ ಉದ್ದೇಶವಾಗಿದೆ.

# ಅಧ್ಯಾಯ -೨

## ಕಾದಂಬರಿ ಸಾಹಿತ್ಯದ ಹುಟ್ಟು ಬೆಳವಣಿಗೆ ಹಾಗು ಸ್ವರೂಪ

ಇಪ್ಪತ್ತನೆಯ ಶತಮಾನದಲ್ಲಿ ಕನ್ನಡ ಸಾಹಿತ್ಯವು ವಿಶಿಷ್ಟ ಪರಂಪರೆಗಳನ್ನು ಬೆಳೆಸಿಕೊಂಡು ಬಂದಿದೆ. ಸಾಹಿತ್ಯ ಹಾಗು ಸಾಂಸ್ಕೃತಿಕ ಒತ್ತಡಗಳು ತಮಗೆ ತಾವೇ ಸ್ವಯಂಪೂರ್ಣವಾಗಿರುವುದಿಲ್ಲ. ಈ ಚಾರಿತ್ರಿಕ ಒತ್ತಡಗಳಿಗೆ ಎದುರಾಗಿ ಸವಾಲುಗಳು, ಸಂಘರ್ಷಗಳು ಉಂಟಾಗಿ ಆ ಮುಖಾಂತರ ಹೊಸ ಪ್ರವೃತ್ತಿಗೆ ಸಾಧ್ಯವಾಗುವ ಪ್ರಕ್ರಿಯೆಗಳನ್ನು ಸಾಹಿತ್ಯ ಕೃತಿಗಳು ಸದಾ ಹುಟ್ಟು ಹಾಕುತ್ತಿರುತ್ತವೆ. ಅಂತಹ ಹೊಸ ಸೃಷ್ಟಿಯಲ್ಲಿ ಕಾದಂಬರಿಯು ಒಂದಾಗಿದೆ. ಕಾದಂಬರಿ ಒಂದು ಕಾಲಘಟ್ಟದ ಸಾಮಾಜಿಕ, ರಾಜಕೀಯ ಪರಿಸರದ ಜೀವಂತ ಘಟನೆಗಳ, ಪಾತ್ರಗಳ ಅದ್ಭುತ ಚಿತ್ರಣವಾಗಿದೆ. ಕಾವ್ಯವಾಗಲೀ, ನಾಟಕವಾಗಲೀ, ಕಾದಂಬರಿಯಾಗಲೀ ಅವುಗಳ ಮೂಲ ಅಂಶ ಕಥೆಯೇ ಆದರೂ ಕಾವ್ಯ, ನಾಟಕಗಳಿಗಿಂತ ಕಾದಂಬರಿ ಭಿನ್ನವಾಗಿದೆ ಅದು ಜನಪ್ರಿಯವಾಗಿರುವುದಕ್ಕೆ ಸರಳವಾದ ನಿರೂಪಣಾ ಶೈಲಿ ಹಾಗೂ ಗದ್ಯರೂಪ ಕಾರಣವಾಗಿದೆ.

ಮೇಲೆ ಸ್ಪಷ್ಟಪಡಿಸಿರುವಂತೆ ಕಾದಂಬರಿಯ ಮೂಲ ಕಥಾಂಶವನ್ನು ಒಳಗೊಂಡಿದೆ. ಕಾದಂಬರಿಯಲ್ಲಿನ ಕಥೆಗಳು ಜನಪದ ಸಾಹಿತ್ಯದಂತೆ ಸಾಮಾನ್ಯರ ಆಸೆ, ಅಭಿಲಾಷೆಗಳನ್ನು ಅವರ ಅಭಿರುಚಿಗಳನ್ನು, ಅವರ ಜೀವನ ರೀತಿ ನೀತಿಗಳನ್ನು, ಅವರ ಸುತ್ತಮುತ್ತಲಿನ ಬದುಕಿನ ಸಾಮಾಜಿಕ ರಾಜಕೀಯ ಪರಿಸರವನ್ನು ಯಥಾವತ್ತಾಗಿ ವಿವರವಾಗಿ ದಾಖಲಿಸುತ್ತವೆ.

ಕಥೆಯನ್ನು ಹೇಳುವುದಕ್ಕೆ ಅವಶ್ಯಕವಾದ ಸಾಧನಗಳನ್ನು ವ್ಯವಸ್ಥಿತ ಬಂಧದಲ್ಲಿ ಹೆಣೆಯುವುದೇ ಕಾದಂಬರಿ. ಕಥೆ, ಘಟನೆ, ಪಾತ್ರಗಳು, ಕಥೆಯ ಕಾಲ–ಇವುಗಳ ಸುಂದರವಾದ ಜೋಡಣೆಯೇ ಒಂದು ಯಶಸ್ವಿಯಾದ ಕಾದಂಬರಿಯಾಗುತ್ತದೆ. ಕಥೆಯನ್ನು ಸುಂದರವಾಗಿ ಹೆಣೆಯುವುದರ ಮೂಲಕ ಕಾದಂಬರಿ 'ಜನಪ್ರಿಯ'ವಾಗುತ್ತದೆ. ಸುಂದರವಾದ ಕಲಾಕೃತಿಯಾಗುತ್ತದೆ. ಕೃತಿಕಾರನ ಜೀವನ ದರ್ಶನವಾಗುತ್ತದೆ ಅಷ್ಟೇ ಅಲ್ಲದೆ ಅದೊಂದು ಹೊಸ ಜಗತ್ತಿನ ವಾಸ್ತವ ನಿರೂಪಣೆಯೂ ಆಗುತ್ತದೆ.

" The fundamental aspect of the Novel is its story telling aspect. The basis of a novel is story and story is a narration of events arranged in time sequence."[೧] ಎನ್ನುವ ಮಾತು ಕಾದಂಬರಿಯ ಸ್ವರೂಪವನ್ನು ಸ್ಪಷ್ಟಪಡಿಸುತ್ತದೆ.

---

೧. F.M. Froster- Aspects of Novel- P 33, E.M. Forster

ಕಾದಂಬರಿಯ ಕಥಾವಸ್ತುವನ್ನು ಕೂಡಿಕೊಂಡಂತೆ, ಇವುಗಳ ಸಾವಯವ ಸಂಬಂಧ ಎಂತಹದು? ಅಗತ್ಯವಾದ ಸಾಧನಗಳು ಯಾವುವು? ಎಂಬ ಪ್ರಶ್ನೆ ಎದುರಾದಾಗ ಕಥಾ ನಿರೂಪಣೆ, ಅಗತ್ಯವಾದ ಘಟನೆಗಳು, ಕಾದಂಬರಿಯ ಭಾಷೆ ಅಗತ್ಯವಾದ ಸಾಧನಗಳಾಗಿವೆ. ಘಟನೆಗಳ ಸರಪಳಿಯೇ ಕಥೆ. ಘಟನೆಗಳೇ ಕಾದಂಬರಿಯ ಜೀವಾಳ. ಕಾದಂಬರಿಯಲ್ಲಿ ಒಂದಾದ ಮೇಲೆ ಒಂದರಂತೆ ಬರುವ ಘಟನೆಗಳು ಓದುಗರ ಕುತೂಹಲವನ್ನು ಕೆರಳಿಸುತ್ತವೆ.

ಪ್ರಪಂಚದಲ್ಲಿ ಅತ್ಯಂತ ಪ್ರಾಚೀನ ಕಾದಂಬರಿಗಳು ಈಜಿಪ್ಟ್ ದೇಶದವು. ಈಜಿಪ್ಟ್ ಸಂಸ್ಕೃತಿಯಷ್ಟೇ ಈ ಕಾದಂಬರಿಯ ಇತಿಹಾಸ ಹಳೆಯದಾದರೂ, ಆದು ಒಂದು ನಿರ್ದಿಷ್ಟ ರೂಪ ತಳೆದದ್ದು ಇನ್ನೂರು ವರ್ಷಗಳಿಂದಿಚೆಗೆ. ೧೯೧೯ ರಲ್ಲಿ ರಚಿತವಾದ ಕೃತಿ ಡೆನಿಯಲ್ ಡೇಪೊನ, 'ರಾಬಿನ್‌ಸನ್ ಕ್ರೋಸೋ' ಪ್ರಥಮ ಇಂಗ್ಲೀಷ್ ಕಾದಂಬರಿ ಎಂದು ಹೇಳುತ್ತಾರೆ. ಆದರೆ ಸ್ಯಾಮ್ಯುಯಲ್ ರಿಚರ್ಡಸನ್‌ನ ಕೃತಿ 'ಸಮೇಲಾ' ಪರಿಪೂರ್ಣವಾದ ಕಾದಂಬರಿಯಾಗಿದೆ. ಇಂಗ್ಲೀಷ್‌ನ 'ನಾವೆಲ್' ಪದ ಲ್ಯಾಟಿನ್‌ನ 'ನೋವೆಸ್' ಎನ್ನುವ ಪದದಿಂದ ಬಂದದ್ದು. 'ನೋವೆಸ್' ಎಂದರೆ ಹೊಸದಾದದ್ದು ಎಂದು ಅರ್ಥ. ಎಲ್ಲ ಪ್ರಕಾರಗಳಲ್ಲಿ ಇದು ಹೊಸದಾಗಿ ಹುಟ್ಟಿದುದರಿಂದ ಇಂಗ್ಲೀಷ್‌ನಲ್ಲಿ ಈ ಹೊಸ ಹೆಸರನ್ನು ಪಡೆಯಿತು. ಕಾದಂಬರಿಯ ಕರ್ತವ್ಯವನ್ನು ಕುರಿತು ವಿಲಿಯಂ ಹಡ್ಸನನ ಹೇಳಿಕೆ ಸ್ಪಷ್ಟವಾಗಿದೆ. ಅವನು ಹೇಳುವಂತೆ, ವಿರಾಮ ಕಾಲದಲ್ಲಿ ಮನರಂಜನೆಯನ್ನು ನೀಡುವುದಾಗಿದೆ. ವಾಸ್ತವಿಕ ವ್ಯವಹಾರಗಳ ಶ್ರಮದಿಂದ ಬಿಡುಗಡೆಯನ್ನು ಒದಗಿಸುತ್ತದೆ. ಮಾತ್ರವಲ್ಲ ಅಖಂಡವಾದ ಸಂತೋಷವನ್ನು ನೀಡುತ್ತದೆ ಎನ್ನುತ್ತಾನೆ. ಇವನ ಹೇಳಿಕೆ ವಾಸ್ತವಕ್ಕೆ ಹತ್ತಿರವಾದ ಸಂಗತಿಯಾಗಿತ್ತು.

ಈ ಸಾಹಿತ್ಯ ಪ್ರಕಾರಕ್ಕೆ ಕನ್ನಡದಲ್ಲಿ ಕಾದಂಬರಿ ಎಂಬ ಹೆಸರು ಬಂದಿದ್ದು ಬಾಣನ ಸಂಸ್ಕೃತ ಕೃತಿ 'ಕಾದಂಬರಿ'ಯಿಂದ ಎಂದು ಹಲವರ ಅಭಿಪ್ರಾಯವಾಗಿದೆ. ಬಾಣನ ಕಥೆ 'ಕಾದಂಬರಿ' ಗದ್ಯದಲ್ಲಿ ರೂಪುಗೊಂಡಿದೆ. ಬಾಣನ ಈ ಕೃತಿಯಲ್ಲಿ 'ಕಾದಂಬರಿ' ನಾಮಧೇಯವುಳ್ಳ ಪದ ಇದ್ದು ಇದೇ ಹೆಸರಿನಿಂದ 'ನಾವೆಲ್' ಪ್ರಕಾರ ಕನ್ನಡದಲ್ಲಿ ಕರೆದಿರಬಹುದೆಂಬ ನಂಬಿಕೆ ಇದೆ. ಕನ್ನಡಕ್ಕಿಂತ ಮೊದಲು ಮರಾಠಿಯಲ್ಲಿ ಈ ಸಾಹಿತ್ಯ ಪ್ರಕಾರಕ್ಕೆ ಕಾದಂಬರಿ ಎಂದು ಕರೆದಿದ್ದುಂಟು. ಕನ್ನಡದಲ್ಲಿ ತಮ್ಮ ಕಲ್ಪಿತ ಕೃತಿಗೆ 'ಕಾದಂಬರಿ' ಎಂದು ಪ್ರಥಮವಾಗಿ ಕರೆದುಕೊಂಡವರು ಲಕ್ಷ್ಮಣರಾವ್ ಭೀಮರಾವ್‌ಗದಕಕರ. ಕ್ರಿ.ಶ. ೧೮೯೨ ರಲ್ಲಿ ರಚಿತವಾದ 'ಸೂರ್ಯಕಾಂತಿ' ಕೃತಿಗೆ ಇವರು ಕನ್ನಡದ ಕಾದಂಬರಿ ಎಂದು ಕರೆದುಕೊಂಡಿದ್ದಾರೆ. ಅನಂತರ ೧೮೯೮ ರಿಂದ ಸ್ವತಂತ್ರವಾಗಿಯೂ, ಮರಾಠಿ ಅನುವಾದ

ಮಾಡಿಯೂ ಗಳಗನಾಥರು ಬರೆದ ತಮ್ಮೆಲ್ಲ ಕೃತಿಗಳಿಗೆ 'ಕಾದಂಬರಿ' ಎಂದೇ ಕರೆದುಕೊಂಡರು.

ಬಂಗಾಳಿ ಕಾದಂಬರಿಗಳ ಭಾಷಾಂತರದ ಮೂಲಕ ಕನ್ನಡಿಗರಿಗೆ ಕಾದಂಬರಿಗಳನ್ನು ಮೊದಲ ಬಾರಿಗೆ ಪರಿಚಯಿಸಿದವರು ಬಿ. ವೆಂಕಟಾಚಾರ್ಯರು. ೧೮೮೫ ರಲ್ಲಿ ಬಂಕಿಮಚಂದ್ರರ 'ದುರ್ಗೇಶನಂದಿನಿ' ಯನ್ನು ವೆಂಕಟಾಚಾರ್ಯರು ಕನ್ನಡಕ್ಕೆ ಅನುವಾದಿಸಿದರು. ಅದಕ್ಕೆ ಬರೆದ ಇಂಗ್ಲೀಷ್ ಮುನ್ನುಡಿಯಲ್ಲಿ ಮೊದಲ ಬಾರಿಗೆ 'ನಾವೆಲ್' ಪದವನ್ನು ಬಳಸಿದರು. ತಮ್ಮ ಮೊದಲ ಅನುವಾದ ಕೃತಿಯಾದ 'ಭ್ರಾಂತಿವಿಲಾಸ'ದ ಮೂಲಕ ವೆಂಕಟಾಚಾರ್ಯರು ಕಾದಂಬರಿಗಳ ಆರಂಭಕ್ಕೆ ನಾಂದಿ ಹಾಡಿದರು.

ಕನ್ನಡದಲ್ಲಿ ಕಾದಂಬರಿ ಹುಟ್ಟುವುದಕ್ಕೆ ಮೊದಲು ಕನ್ನಡ ಗದ್ಯ ಪ್ರಕಾರವೊಂದು ಬೆಳೆದು ಬರಬೇಕಿತ್ತು. ತಿರುಮಲಾರ್ಯನ 'ಚಿಕ್ಕದೇವರಾಜಬಿನ್ನಪ' ವಸ್ತು ಹಾಗು ಭಾಷೆ ಇವೆರಡು ದೃಷ್ಟಿಯಿಂದಲೂ ಪ್ರಾಚೀನ ಸಾಹಿತ್ಯ ಸ್ವರೂಪದ್ದಾಗಿದೆ. ಮುದ್ದಣ 'ಗೋದಾವರಿ' ಎಂಬ ಕಾದಂಬರಿಯನ್ನು ಅರ್ಧ ಮುಗಿಸಿದ್ದಾಗಿ ತಿಳಿದು ಬಂದಿದೆ. ಕೆಂಪು ನಾರಾಯಣನ 'ಮುದ್ರಾಮಂಜೂಷ' ದಲ್ಲಿಯ ಕಥನ ರೀತಿ ಕಾದಂಬರಿಗೆ ಹೆಚ್ಚು ಸಮೀಪ ಎನ್ನಬಹುದು. ಕೆಂಪುನಾರಾಯಣ ಕಾದಂಬರಿಯನ್ನು ಬರೆಯದಿದ್ದರೂ ಅದರ ಬರವಣಿಗೆಗೆ ಕನ್ನಡ ಗದ್ಯವನ್ನು ಹದಗೊಳಿಸಿದ ಶ್ರೇಯಸ್ಸು ಆತನಿಗೆ ಸಲ್ಲುತ್ತದೆ.

ಕಾದಂಬರಿ ಪ್ರಕಾರದ ಬೆಳವಣಿಗೆಯನ್ನು ಮೂರು ಹಂತಗಳಲ್ಲಿ ಗುರುತಿಸುವ ಪರಿಪಾಠವಿದೆ.

- ಆರಂಭ ಕಾಲ:
  ೧೯ನೇ ಶತಮಾನದ ಉತ್ತಾರಾರ್ಧದಿಂದ ೨೦ನೇಯ ಶತಮಾನದ ಕಾಲು ಶತಕದವರೆಗೆ.
- ನಿರ್ಮಾಣ ಶೀಲಯುಗ:
  ಸುಮಾರು ೧೯೨೫ ರಿಂದ ಸ್ವಾತಂತ್ರ್ಯೋದಯದವರೆಗೆ.
- ಸ್ವಾತಂತ್ರ್ಯೋತ್ತರ ಯುಗ:
  ಸ್ವಾತಂತ್ರ್ಯೋದಯ ಕಾಲದಿಂದ ಪ್ರಸಕ್ತದವರೆಗೆ.[೨]

೧೮೯೯ರಲ್ಲಿ ಗುಲ್ವಾಡಿ ವೆಂಕಟಾರಾಯರು ಬರೆದ 'ಇಂದಿರಾಬಾಯಿ' ಅಥವಾ 'ಸದ್ಧರ್ಮವಿಜಯ' ಕನ್ನಡದ ಪ್ರಥಮ ಸ್ವತಂತ್ರ ಸಾಮಾಜಿಕ ಕಾದಂಬರಿ ಎಂದು ಹೇಳಲಾಗುತ್ತದೆ. 'ಭಾಗೀರಥಿ' ಮತ್ತು 'ಸೀಮಂತಿನಿ' ಇವರ ಇತರ ಕಾದಂಬರಿಗಳಾಗಿವೆ. ೧೮೯೫ರಲ್ಲಿ ಪ್ರಕಟವಾದ 'ಕೇಸರಿ ವಿಲಾಸ'ವು ಕಾದಂಬರಿಯ ಲಕ್ಷಣಗಳನ್ನುಳ್ಳ ಕನ್ನಡದ ಪ್ರಥಮ ಸ್ವತಂತ್ರ ಕಾದಂಬರಿ ಎಂದು ಗೋವಿಂದ ಪೈ ರವರು ಅಭಿಪ್ರಾಯಪಟ್ಟಿದ್ದಾರೆ.

---

೨. ತ.ಸು.ಶಾಮರಾಯ: ಕನ್ನಡ ಸಾಹಿತ್ಯ ಚರಿತ್ರೆ: ಪುಟ ೨೧೭ ಕನ್ನಡ ಸಾಹಿತ್ಯ ಪರಿಷತ್ತು ೨೦೧೦

ಕಾದಂಬರಿ ಪ್ರಕಾರದ ಬೆಳವಣಿಗೆಯಲ್ಲಿ ಗಳಗನಾಥರ ಹೆಸರನ್ನು ಸ್ಮರಿಸಬಹುದಾಗಿದೆ. ೧೮೯೮ ರಲ್ಲಿ ಬಂದ ಪದ್ಮನಯನ ಇವರ ಪ್ರಥಮ ಕಾಲ್ಪನಿಕ ಕಾದಂಬರಿ. ೧೯೦೮ರಲ್ಲಿ ಪ್ರಕಟವಾದ ವಾಸುದೇವಾಚಾರ್ಯರ 'ಇಂದಿರೆ' ಉತ್ತರ ಕರ್ನಾಟಕದ ಭಾಷೆಯನ್ನು ಬಳಸಿಕೊಂಡಿರುವ ಸ್ವತಂತ್ರ ಕಾದಂಬರಿಯಾಗಿದ್ದು ವಿಧವಾ ವಿವಾಹ, ಸ್ತ್ರೀ ಶಿಕ್ಷಣ ಮತ್ತು ಸ್ತ್ರೀ ಸ್ವಾತಂತ್ರ್ಯದಂತಹ ವಿಷಯಗಳನ್ನು ಪ್ರಸ್ತಾಪಿಸುವುದರ ಮೂಲಕ ಗಮನಾರ್ಹ ಕೃತಿಯೆನಿಸಿದೆ.

ಕಾದಂಬರಿಗಳ ಆರಂಭ ಕಾಲದಲ್ಲಿ ಹಲವರು ಕೃತಿ ರಚನೆಯಲ್ಲಿ ತೊಡಗಿದ್ದರು. ಮೈಸೂರು ತಾತಯ್ಯ ಎಂದೇ ಪ್ರಸಿದ್ಧರಾದ ವೆಂಕಟಕೃಷ್ಣಯ್ಯನವರು ಬರೆದ 'ಚೋರ ಗ್ರಹಣ ತಂತ್ರ' ಕನ್ನಡದ ಮೊದಲ ಪತ್ತೇದಾರಿ ಕಾದಂಬರಿಯಾಗಿದೆ. ೧೮೯೫ರಲ್ಲಿ ಶ್ರೀಕಂಠೇಶಗೌಡರ 'ಕನ್ಯಾವಿತಂತು' ಪ್ರಕಟವಾಯಿತು. 'ರಾಜಶೇಖರ ಚರಿತ್ರೆ' 'ಸತ್ಯವತಿ ಚರಿತ್ರೆ' ಮತ್ತು ' ಸತ್ಯರಾಜನ ಪೂರ್ವದೇಶದ ಯಾತ್ರಿಗಳು' ಎಂಬ ಮೂರು ಕೃತಿಗಳನ್ನು ಬೆನೆಗಲ್ ರಾಮರಾಯರು ೧೮೯೯ರ ವೇಳೆಗಾಗಲೇ ತೆಲುಗಿನಿಂದ ಕನ್ನಡಕ್ಕೆ ಭಾಷಾಂತರ ಮಾಡಿದ್ದರು.

ಓದುವ ಪ್ರವೃತ್ತಿಯನ್ನು ಜನರಲ್ಲಿ ಹುಟ್ಟು ಹಾಕಿ, ಕನ್ನಡ ಜನತೆಗೆ ಬಂಗಾಳಿ ಕೃತಿಗಳನ್ನು ತಂದುಕೊಟ್ಟು ಜನಪ್ರಿಯತೆಗಳಿಸಿದವರು ವೆಂಕಟಾಚಾರ್ಯರು. ಈಶ್ವರ ಚಂದ್ರ ವಿದ್ಯಾಸಾಗರ, ಬಂಕಿಮಚಂದ್ರ, ರಮೇಶಚಂದ್ರದತ್ತ, ಮುಂತಾದವರ ಕೃತಿಗಳನ್ನು ಕನ್ನಡಕ್ಕೆ ತರುವ ಕಾರ್ಯವನ್ನು ಇವರು ಸುಮಾರು ಎರಡು ದಶಕಗಳ ಕಾಲ ಮುಂದುವರಿಸಿದರು. ಸಂಸ್ಕೃತದಿಂದ ತುಂಬಿದ ಶುದ್ಧ ಗ್ರಾಂಥಿಕ ಶೈಲಿಯನ್ನು ವೆಂಕಟಾಚಾರ್ಯರ ಕೃತಿಗಳಲ್ಲೂ ಕಾಣಬಹುದು. 'ಆನಂದಮಠ' 'ವಿಷವೃಕ್ಷ' 'ದೇವೀ ಚೌಧುರಾಣಿ' ಮುಂತಾದ ಇವರ ಕಾದಂಬರಿಗಳು ಇಂದಿಗೂ ಜನಪ್ರಿಯವಾಗಿವೆ. ಬಂಕಿಮಚಂದ್ರರು ದೇಶಾಭಿಮಾನ, ಸಾಹಸಪ್ರವೃತ್ತಿ, ಭಕ್ತಿ ಮುಂತಾದ ಗುಣಗಳಿಂದ ಕೂಡಿದ ಐತಿಹಾಸಿಕ, ಸಾಮಾಜಿಕ ಕಾದಂಬರಿಗಳನ್ನಲ್ಲದೆ, ನಮ್ಮ ದೇಶದ ಚಾರಿತ್ರಕ ಘಟನೆಗಳ ಆಧಾರದ ಮೇಲೆಯೂ ಕಾದಂಬರಿಗಳನ್ನು ರಚಿಸಿದರು.

ಗಳಗನಾಥರೂ ಕೂಡ ಪ್ರಮುಖ ಕಾದಂಬರಿಕಾರರ ಸಾಲಿಗೆ ಸೇರಿದವರು. ಮರಾಠಿಯಿಂದ ಕನ್ನಡಕ್ಕೆ ಅನುವಾದ ಮಾಡುವುದು ಮಾತ್ರವಲ್ಲದೆ, ಸ್ವತಂತ್ರ ಕೃತಿ ರಚನೆಯಲ್ಲಿಯೂ ಅವರು ತೊಡಗಿದ್ದರು. ಹಲವಾರು ಕಾದಂಬರಿಗಳಿಗೆ ಮರಾಠಿಯಿಂದ ವಸ್ತುವನ್ನು ಆಯ್ದುಕೊಂಡು ತಮಗೆ ಸರಿಕಂಡಂತೆ ಮಾರ್ಪಾಡುಗಳನ್ನು ಮಾಡಿ ಕನ್ನಡಕ್ಕೆ ತರುವ ಪ್ರಯತ್ನ ಮಾಡಿದ್ದಾರೆ. ಅವರ ಶೈಲಿ ತುಂಬಾ ಸರಳವಾಗಿದ್ದು ನೇರವಾದ ನಿರೂಪಣೆಯಿಂದ ಕೂಡಿದೆ. ವಿಜಯನಗರದ ಇತಿಹಾಸವನ್ನು ವಸ್ತುವಾಗಿ ಮಾಡಿಕೊಂಡು ಗಳಗನಾಥರು ರಚಿಸಿದ ಸ್ವತಂತ್ರ ಮೇರು ಕೃತಿ 'ಮಾಧವ ಕರುಣಾ ವಿಲಾಸ'. ಇವರ

ಐತಿಹಾಸಿಕ ಕಾದಂಬರಿ 'ಕನ್ನಡಿಗರ ಕರ್ಮ ಕಥೆ' ತಾಳಿಕೋಟೆಯ ಯುದ್ಧವನ್ನು ವಸ್ತುವಾಗಿ ಹೊಂದಿದೆ. ಇವರ ಬಹುತೇಕ ಕಾದಂಬರಿಗಳು ಮರಾಠರ ಮತ್ತು ರಜಪೂತರ ಚರಿತ್ರೆಗಳಿಗೆ ಸಂಬಂಧಿಸಿವೆ. ಇವರ ಕಾದಂಬರಿಗಳಲ್ಲಿ ದೇಶಾಭಿಮಾನ, ಕ್ಷಾತ್ರತೇಜಸ್ಸು ಮತ್ತು ಧಾರ್ಮಿಕ ಪ್ರಭಾವ ಹಾಸುಹೊಕ್ಕಾಗಿವೆ. ಉತ್ತರ ಕರ್ನಾಟಕದ ಹಾಡು ಭಾಷೆಯ ಬಳಕೆ ಗಳಗನಾಥರ ಕೃತಿಗಳಲ್ಲಿ ಕಂಡು ಬರುತ್ತದೆ. ಇವರ ಕೃತಿಗಳು ಎರಡು ರೀತಿಯ ಜಾಗೃತಿಯನ್ನುಂಟು ಮಾಡಿದವು. ಮೊದಲನೆಯದಾಗಿ ಕಾದಂಬರಿಯಂಥ ಹೊಸದೊಂದು ಸಾಹಿತ್ಯ ಪ್ರಕಾರವನ್ನು ಓದುಗರು ಆತ್ಮೀಯವನ್ನಾಗಿ ಮಾಡಿಕೊಂಡದ್ದು ಎರಡನೆಯದಾಗಿ ನಾಡುನುಡಿಗಳ ಬಗ್ಗೆ ಅಭಿಮಾನ ಮೂಡಿಸಿದ್ದು. ಕನ್ನಡಕ್ಕೆ ಅನುವಾದ ಕಾದಂಬರಿಗಳು ಬಂದಿದ್ದು ಬಂಗಾಲಿ, ಮರಾಠಿ ಮತ್ತು ತೆಲುಗಿನಿಂದ. 'ವಂದೇ ಮಾತರಂ' ನಂತಹ ಗೀತೆಗಳು ಸ್ವಾತಂತ್ರ ಅಭಿಲಾಷೆಯ ದುಂದುಬಿಯನ್ನು ಮೊಳಗಿಸಿದವು. ಕನ್ನಡ ಸಾಹಿತ್ಯದ ಅನೇಕ ರೀತಿಯ ಬೆಳವಣಿಗೆಗೆ ಇವೆಲ್ಲ ಕಾರಣವಾಗಿವೆ.

ಕನ್ನಡ ಕಾದಂಬರಿಗಳ ಆರಂಭ ಕಾಲದಲ್ಲಿ ಸ್ತ್ರೀಯರ ಕೊಡುಗೆ ಸಂದದು ಸತಿ ಹಿತೈಷಿಣಿ ಮಾಲೆಯ ತಿರುಮಲ್ಲಮ್ಮನವರ ಮೂಲಕ. 'ವಿದ್ಯುಲ್ಲತಾ ವಿರಾಗಿಣಿ', 'ನಭ', 'ಪೂರ್ಣಕಲಾ' ಮುಂತಾದವು ಅವರ ಕೃತಿಗಳು. ಸ್ತ್ರೀಯರು ಮತ್ತು ಅವರ ಸಾಮಾಜಿಕ ಸ್ಥಾನಮಾನಗಳ ವಿಷಯದ ಪ್ರಸ್ತಾಪ ಇವರ ಕೃತಿಗಳಲ್ಲಿ ಕಂಡು ಬರುತ್ತದೆ.

೧೯೩೦ರ ನಂತರದ ಕಾದಂಬರಿಗಳ ನಿರ್ಮಾಣದಲ್ಲಿ ಕಾದಂಬರಿಗಳ ರೂಪುರೇಷೆಗಳು ಸ್ಪಷ್ಟವಾಗಿ ಗೋಚರಿಸುತ್ತವೆ. ವಸ್ತು, ಶೈಲಿ, ತಂತ್ರ ಮತ್ತು ನಿರೂಪಣೆಯಲ್ಲಿ ಆಧುನಿಕತೆಯ ಲಕ್ಷಣಗಳು ಮೂಡತೊಡಗಿದವು. ಈ ಕಾಲಕ್ಕೆ 'ನಿರ್ಮಾಣಶೀಲಯುಗ'ವೆಂದು ಹೆಸರು ಬರಲು ಇದೇ ಕಾರಣ. ೧೯೩೩ರಲ್ಲಿ ಶಿವರಾಮ ಕಾರಂತರ 'ಚೋಮನದುಡಿ' ಪ್ರಕಟವಾಯಿತು. ಬೆಟಗೇರಿ ಕೃಷ್ಣಶರ್ಮ(ಆನಂದ ಕಂದ)ರ 'ಸುದರ್ಶನ' ಮತ್ತು 'ಮಗಳಮದುವೆ' ರಂ.ಶ್ರೀ. ಮುಗಳಿಯವರ 'ಬಾಳುರಿ' 'ಅನ್ನ' 'ಕಾರಣಪುರುಷ' ಜಡ–ಭರತರ 'ಧರ್ಮಸೆರೆ' ಮುಂತಾದ ಕಾದಂಬರಿಗಳು ಆದರ್ಶವಾದದ ತಳಹದಿಯ ಮೇಲೆ ನಿರ್ಮಾಣಗೊಂಡವು. ಅ.ನ.ಕೃಷ್ಣರಾಯರ 'ಉದಯರಾಗ' ಮತ್ತು 'ಜೀವನಯಾತ್ರೆ', ಶ್ರೀರಂಗರ 'ವಿಶ್ವಾಮಿತ್ರ ಸೃಷ್ಟಿ', ೧೯೩೫ರಲ್ಲಿ ಆನಂದ ಕಂದರ 'ರಾಜಯೋಗಿ' ಮತ್ತು 'ಅಶಾಂತಿ ಪರ್ವ' ಎಂಬ ಎರಡು ಐತಿಹಾಸಿಕ ಕಾದಂಬರಿಗಳು, ವಿನಾಯಕರ 'ಇಜ್ಜೋಡು' ಅ.ನ.ಕೃ.ರವರ 'ಸಂಧ್ಯಾರಾಗ' ಮುಂತಾದ ಕೃತಿಗಳು ಹೊರಬಂದವು. ಕುವೆಂಪುರವರ ಬೃಹತ್ ಕಾದಂಬರಿ 'ಕಾನೂರು ಸುಬ್ಬಮ್ಮ ಹೆಗ್ಗಡತಿ' ೧೯೩೬ರಲ್ಲಿ ಪ್ರಕಟವಾಯಿತು.

ಕುವೆಂಪು, ಶಿವರಾಮ ಕಾರಂತ, ಅ.ನ.ಕೃ, ಆನಂದಕಂದ, ರಂ.ಶ್ರೀ.ಮುಗುಳಿ, ಕಡೆಂಗೊಡ್ಲು ಶಂಕರಭಟ್ಟ, ಶ್ರೀರಂಗ, ಮಿರ್ಜಿಅಣ್ಣಾರಾಯ, ದೇವುಡು ಮೊದಲಾದವರು ನಿರ್ಮಾಣಶೀಲಯುಗದ ಪ್ರಮುಖ ಕಾದಂಬರಿಕಾರರಾಗಿದ್ದು, ಇವರೆಲ್ಲ ಆಧುನಿಕ ವಿದ್ಯಾಭ್ಯಾಸವನ್ನು ಪಡೆದ ವಿಚಾರಶೀಲರೂ ಹೌದು.

ಶಿವರಾಮ ಕಾರಂತರ 'ದೇವದೂತರು' (೧೯೨೮) ಅವರ ಮೊದಲ ಮಹತ್ವದ ಕೃತಿ. ಅವರ 'ಚೋಮನ ದುಡಿ' ಸಾಮಾಜಿಕ ಕಾಳಜಿಯಿಂದ ಕೂಡಿದ್ದು, ಶೋಷಣೆಗೆ ಒಳಗಾದ ದಲಿತನೊಬ್ಬನ ಬದುಕು ಹೇಗೆ ನಾಶವಾಯಿತು ಎಂಬುದರ ಚಿತ್ರಣ ನೀಡುತ್ತದೆ. ಈ ಕಾದಂಬರಿ ಚೋಮನ ಬದುಕಿನ ಸುತ್ತ ಹೆಣೆಯಲಾದ ಹಸಿವಿನ, ಅನ್ಯಾಯದ ಅವಮಾನದ ಕಥೆ. ಕಾರಂತರ 'ಮರಳಿ ಮಣ್ಣಿಗೆ'(೧೯೪೨) ಕನ್ನಡದ ಮಹಾಕಾದಂಬರಿಗಳಲ್ಲಿ ಒಂದು ಎನಿಸಿದೆ.

ಕುವೆಂಪುರವರ 'ಕಾನೂರು ಸುಬ್ಬಮ್ಮ ಹೆಗ್ಗಡತಿ' (೧೯೩೬) ಮತ್ತು 'ಮಲೆಗಳಲ್ಲಿ ಮದುಮಗಳು' ಕನ್ನಡದ ಎರಡು ಮಹಾ ಕಾದಂಬರಿಗಳು. ಭಾಷೆಯ ಬಳಕೆಯ ದೃಷ್ಟಿಯಿಂದ, ಇವು ಕನ್ನಡ ಗದ್ಯ ಶೈಲಿಯ ಶ್ರೀಮಂತ ಪ್ರತಿನಿಧಿಗಳೆನಿಸಿವೆ. ತಮ್ಮ 'ಸಂಧ್ಯಾರಾಗ' ಕಾದಂಬರಿಯಿಂದ ಖ್ಯಾತರಾದ ಅ.ನ.ಕೃ. ಕನ್ನಡದಲ್ಲಿ ಅತಿ ಹೆಚ್ಚು ಕಾದಂಬರಿಗಳನ್ನು ರಚಿಸಿ 'ಕಾದಂಬರಿ ಸಾರ್ವಭೌಮ' ಎಂಬ ಮನ್ನಣೆಗೆ ಪಾತ್ರರಾದವರು. ಪ್ರಗತಿಶೀಲ ಪಂಥವನ್ನು ಅನುಸರಿಸಿದವರಲ್ಲಿ ತ.ರಾ. ಸುಬ್ಬರಾಯರು, ಬಸವರಾಜ ಕಟ್ಟೀಮನಿ, ನಿರಂಜನ ಮತ್ತು 'ಚದುರಂಗ' ಕಾವ್ಯನಾಮದ ಸುಬ್ರಮಣ್ಯರಾಜ ಅರಸ್ ಮುಂತಾದ ಪ್ರಮುಖರಿಂದ ಪ್ರಗತಿಶೀಲ ಕಾದಂಬರಿಗಳು ಹುಟ್ಟಿದವು. ಸ್ವಾತಂತ್ರ್ಯೋತ್ತರ ಕಾಲದಲ್ಲಿ ಕಾದಂಬರಿಗಳನ್ನು ಬರೆದ ಲೇಖಕರ ಸಂಖ್ಯೆ ಗಣನೀಯವಾಗಿದೆ. ಶಿವರಾಮ ಕಾರಂತ, ಕುವೆಂಪು, ರಾವ್‌ಬಹುದ್ದೂರ್, ದೇವುಡು, ಮಿರ್ಜಿಅಣ್ಣಾರಾಯ ವ್ಯಾಸರಾಯ ಬಲ್ಲಾಳ, ಬೀಚಿ, ಕೃಷ್ಣಮೂರ್ತಿ ಪುರಾಣಿಕ, ಎಸ್.ಎಲ್.ಭೈರಪ್ಪ ಯಶವಂತ ಚಿತ್ತಾಲ ಯು.ಆರ್ ಅನಂತಮೂರ್ತಿ, ಪಿ.ಲಂಕೇಶ ಪೂರ್ಣಚಂದ್ರ ತೇಜಸ್ವಿ, ದೇವನೂರು ಮಹಾದೇವ ಮೊದಲಾದವರು.

ಸ್ವಾತಂತ್ರ್ಯೋತ್ತರ ಕಾಲದಲ್ಲಿ ಕಾದಂಬರಿ ರಚನೆಗೆ ಸ್ತ್ರೀಯರ ಕೊಡುಗೆಯೂ ಸಂದಿದೆ. ಬೆಳ್ಳಿಮೋಡ, ಹಣ್ಣೆಲೆ ಚಿಗುರಿದಾಗ, ಬೆಕ್ಕಿನಕಣ್ಣು, ಮುಂತಾದ ಕಾದಂಬರಿಗಳನ್ನು ನೀಡಿದ 'ತ್ರಿವೇಣಿ' ಕಾವ್ಯನಾಮದ ಅನುಸೂಯಾ ಅತ್ಯಂತ ಜನಪ್ರಿಯರಾದವರು. ಎಂ.ಕೆ.ಇಂದಿರಾ, ವಾಣಿ, ಎಂ.ಕೆ.ಜಯಲಕ್ಷ್ಮೀ, ಅನುಪಮಾ ನಿರಂಜನ, ಗೀತಾಕುಲಕರ್ಣಿ, ಎ,ವಿ.ಮಾಲತಿ, ಕೆ.ಸರೋಜದೇವಿ, ವೀಣಾಶಾಂತೇಶ್ವರ, ಗೀತಾ ನಾಗಭೂಷಣ್, ಮುಂತಾದವರು

ಕಾದಂಬರಿಗಳನ್ನು ಹೊರತಂದಿದ್ದಾರೆ. ಕಾದಂಬರಿಗಳಿಗೆ ವಸ್ತುವಾಗುವಂತಹದ್ದು ವಿಪುಲವಾಗಿ ಇರುತ್ತದೆ. ವಿಜ್ಞಾನ, ಪುರಾಣ, ಇತಿಹಾಸ, ವ್ಯಕ್ತಿಯೊಬ್ಬನ ಅಂತರಂಗ ಹೀಗೆ ಯಾವುದು ಬೇಕಾದರೂ ಕಾದಂಬರಿಗೆ ವಸ್ತುವಾಗಬಲ್ಲದು. ವಸ್ತುವಿಗೆ ತಕ್ಕಂತೆ ಕಾದಂಬರಿಯಲ್ಲಿಯೂ ವೈಜ್ಞಾನಿಕ, ಪೌರಾಣಿಕ, ಐತಿಹಾಸಿಕ, ಸಾಮಾಜಿಕ ಕಾದಂಬರಿ ಎಂಬ ವಿಭಾಗಗಳು ಕಾಣಿಸುತ್ತವೆ.[೨]

## ೧) ಸಾಮಾಜಿಕ ಕಾದಂಬರಿಗಳು:

ಕನ್ನಡದಲ್ಲಿ ಸಾಮಾಜಿಕ ಕಾದಂಬರಿಗಳನ್ನು ರಚಿಸುವ ಪ್ರಯತ್ನ ನಡೆಯಿತೆನ್ನಬಹುದು. ಗುಳವಾಡಿ ವೆಂಕಟರಾಯರ 'ಇಂದಿರಾಬಾಯಿ' ಬಂದ ನಂತರ ಸ್ವತಂತ್ರ ಸಾಮಾಜಿಕ ಕಾದಂಬರಿ ಎಂದರೆ ಮೈಸೂರಿನ ಜಿ. ರಾಘವೇಂದ್ರರಾಯರ 'ಸೀತೆ' ಯನ್ನು ಹೆಸರಿಸಬೇಕು. ಅನಂತರ ಬಂದ ಮಹತ್ವದ ಕಾದಂಬರಿ ಬೋಳಾರ ಬಾಬೂರಾಯರ 'ವಾಗ್ದೇವಿ' ಎಂ.ಎಸ್.ಪುಟ್ಟಣ್ಣನವರ 'ಮಾಡಿದ್ದುಣ್ಣೋ ಮಾರಾಯ' ಹಾಗು ಕೆರೂರು ವಾಸುದೇವಾಚಾರ್ಯರ 'ಇಂದಿರಾ' ಕಾದಂಬರಿಗಳು ಸ್ವತಂತ್ರ ಕೃತಿಗಳಾದುದರಿಂದ ಅವುಗಳಿಂದ ನಮ್ಮ ಆಧುನಿಕ ಕಾದಂಬರಿ ಇತಿಹಾಸ ಆರಂಭವಾಯಿತೆಂದು ಹೇಳಬಹುದು.[೩] ಇವುಗಳಲ್ಲಿ ವಾಸ್ತವ ವ್ಯಕ್ತಿಗಳ ಜೀವಂತತನದಲ್ಲಿ ಆದರ್ಶವನ್ನು ಕಾಣುವ ಮಹತ್ವದ ಪ್ರಯೋಗವನ್ನು ಗುರುತಿಸಬಹುದಾಗಿದೆ.

ಕರ್ನಾಟಕದಲ್ಲಿ ಸಾಮಾಜಿಕ ಸುಧಾರಣೆಯ ಬೆಳಗಿನ ಗಾಳಿ ತೀಡುತ್ತಿರುವ ಕಾಲದಲ್ಲಿ ವಾಸುದೇವಚಾರ್ಯರು ಪುನರ್ವಿವಾಹ, ಸ್ತ್ರೀಶಿಕ್ಷಣ, ಸ್ತ್ರೀ ಸ್ವಾತಂತ್ರ್ಯ ಇವೇ ವಸ್ತುಗಳನ್ನಾಶ್ರಯಿಸಿ 'ಇಂದಿರೆ'- ಕಾದಂಬರಿಯನ್ನು ರಚಿಸಿದ್ದಾರೆ. ಈ ಮೂರು ಸಾಮಾಜಿಕ ಕಾದಂಬರಿಗಳು ಕನ್ನಡ ಕಾದಂಬರಿಯ ಸ್ವರೂಪವನ್ನು ನಿಖರಗೊಳಿಸಲು ಪ್ರಯತ್ನಿಸಿದವು. ಒಟ್ಟಿನಲ್ಲಿ ಕನ್ನಡದಲ್ಲಿ ಹದಗೊಳ್ಳುತ್ತಿದ್ದ ಗದ್ಯ ಪ್ರಕಾರ, ಪಾಶ್ಚಾತ್ಯ ಸಾಹಿತ್ಯದ ಪ್ರಭಾವವನ್ನು, ಜೀರ್ಣಿಸಿಕೊಂಡು ಕನ್ನಡದಲ್ಲಿ ಹೊಸತನ ಹಾಗೂ ಹೊಸ ಪ್ರಯೋಗದ ಕಡೆಗೆ ಮುಖ ಮಾಡಿದ್ದನ್ನು ಕಾಣಬಹುದು.

## ೨) ವಾಸ್ತವವಾದಿ ಕಾದಂಬರಿಗಳು:

ಸಾಹಿತ್ಯ ಸಾಮಾನ್ಯ ಜನತೆಯ ಜೀವನಾಡಿಯಾಗಬೇಕೆಂಬುದು ಹೊಸ ಸಾಹಿತ್ಯದ ಮೂಲ ಉದ್ದೇಶವಾಗಿತ್ತು. ಈ ಜವಾಬ್ದಾರಿ ಕಾವ್ಯಕ್ಕಿಂತ ಗದ್ಯದ ಮೇಲೆ ಹೆಚ್ಚಾಯಿತು. ಮಧ್ಯಮ ವರ್ಗದ ಸಮಾಜದಿಂದ ಮೂಡಿ ಬಂದ ಲೇಖಕರು ಆ ವರ್ಗದ ಆಸೆ-ಆಕಾಂಕ್ಷೆಗಳನ್ನು ಪ್ರಕಟಿಸಲು ಸಿದ್ಧರಾದರು. ಸಾಮಾನ್ಯ ಜನತೆಯ ಕೌಟುಂಬಿಕ ಅಥವಾ ಸಾಮಾಜಿಕ ಜೀವನ ಸಾಹಿತ್ಯ ಲೋಕದಿಂದ ದೂರವಾಗಿಯೇ ಉಳಿದಿತ್ತು. ಕಾದಂಬರಿ

---

೩. ಅ.ನ.ಕೃಷ್ಣರಾಯ ಸಾಹಿತ್ಯ ಮತ್ತು ಯುಗಧರ್ಮ: ಪುಟ ಸಂಖ್ಯೆ ೩೩: ಸಾಗರ್ ಪ್ರಕಾಶನ ೧೯೫೨

ಅವರ ಜೀವನದ ಆದರ್ಶಗಳನ್ನು ರೂಪಿಸಬೇಕಾಯಿತು. ನೈತಿಕ ಮೌಲ್ಯಗಳೇ ಬದಲಾಗುತ್ತಿತ್ತು. ಸಮಾಜದ ಹತ್ತು ಹಲವು ಸಮಸ್ಯೆಗಳು ಕಾದಂಬರಿಯ ವಸ್ತುಗಳಾದವು. ಬಾಲ್ಯ ವಿವಾಹ, ಜಾತೀಯತೆ, ಜೀತ ಪದ್ದತಿ, ಸಾಮಾಜಿಕ ಅನ್ಯಾಯಗಳು, ಹೊಸ ಆಚಾರವಿಚಾರಗಳು, ಸ್ತ್ರೀ ಶಿಕ್ಷಣ , ಪಾಶ್ಚಾತ್ಯ ಸಂಸ್ಕೃತಿಯ ಪ್ರಭಾವ, ಸ್ವಾತಂತ್ರ್ಯ ಚಳುವಳಿ, ಹೀಗೆ ಕಾದಂಬರಿಗೆ ವಿಪುಲ ವಸ್ತುಗಳನ್ನು ದೊರಕಿಸಿಕೊಟ್ಟವು.

ಬಂಕಿಮಚಂದ್ರ, ವಾಲ್ಟರ್‌ಸ್ಕಾಟ್ ಮುಂತಾದವರು ಐತಿಹಾಸಿಕ ಕಾದಂಬರಿಗಳಿಗೆ ಪ್ರೇರಣೆಯನ್ನಿತ್ತರೆ; ಶರತ್‌ಚಂದ್ರ, ರವೀಂದ್ರನಾಥ ಟಾಗೋರ್, ಟಾಲ್‌ಸ್ಟಾಯ್, ಮುಂತಾದವರ ಕಾದಂಬರಿಗಳು ಕನ್ನಡದಲ್ಲಿ ವಾಸ್ತವವಾದಿ ಕಾದಂಬರಿಗಳಿಗೆ ಪ್ರೇರಣೆಯಾದವು.

ಕನ್ನಡದಲ್ಲಿ ಅ.ನ.ಕೃಷ್ಣರಾಯರ ಕಾದಂಬರಿಗಳಿಗೆ ಇಂತಹ ವಾತಾವರಣ ಹಿನ್ನಲೆಯಾಗಿದೆ. ಕಾದಂಬರಿಯ ವಾಸ್ತವ ಸಂಪ್ರದಾಯದಲ್ಲಿ ಅ.ನ.ಕೃ ಅವರಿಗೆ ಮಹತ್ವದ ಸ್ಥಾನವಿದೆ. ಕಲೆ ಇತಿಹಾಸ, ಧರ್ಮ, ಸಾಹಿತ್ಯ, ರಾಷ್ಟ್ರೀಯತೆ, ಸಂಸ್ಕೃತಿ, ಸ್ತ್ರೀ ಸ್ವಾತಂತ್ರ್ಯ, ರಾಜಕೀಯ, ಜಾತಿ ಸಮಸ್ಯೆ, ವೇಶ್ಯಾ ಸಮಸ್ಯೆ ಇನ್ನು ಅನೇಕ ವಿಚಾರಗಳು ಅವರ ಕಾದಂಬರಿಯ ವಸ್ತುಗಳು. 'ಉದಯರಾಗ' 'ಸಂಧ್ಯಾರಾಗ' 'ನಗ್ನ ಸತ್ಯ' 'ನಟ ಸಾರ್ವಭೌಮ' 'ಶನಿ ಸಂತಾನ' ಮುಂತಾದವು ಅವರ ಜನಪ್ರಿಯ ಕಾದಂಬರಿಗಳು. ಇವರು ಕಾದಂಬರಿಗಳ ಮೂಲಕ ಅಪಾರ ಓದುಗರನ್ನು ಸೃಷ್ಟಿಸಿದರು. ಓದುಗರಲ್ಲಿ ಸಾಹಿತ್ಯಾಭಿರುಚಿ, ಕಾದಂಬರಿಗಳನ್ನು ಓದುವ ಹವ್ಯಾಸ ಎರಡೂ ಅ.ನ.ಕೃ ಅವರಿಂದಲೇ ಪ್ರಾರಂಭವಾಯಿತು. ಅ.ನ.ಕೃ. ಅವರ ದಾರಿಯಲ್ಲೇ ಸಾಗಿದ ಇನ್ನೊಬ್ಬ ಕನ್ನಡದ ಕಾದಂಬರಿಕಾರರೆಂದರೆ ತ.ರಾ.ಸು. ಇದೆ ಸಂದರ್ಭದಲ್ಲಿ ಬಹುಮುಖ ಪ್ರತಿಭೆಯುಳ್ಳ ಕಾರಂತ, ಕುವೆಂಪುರವರು ವಾಸ್ತವವಾದಿ ಕಾದಂಬರಿಗಳನ್ನು ರಚಿಸಿದರು. ಕಾರಂತರು 'ಮರಳಿ ಮಣ್ಣಿಗೆ' 'ಚೋಮನದುಡಿ', 'ಸರಸಮ್ಮನ ಸಮಾಧಿ' 'ಔದಾರ್ಯದ ಉರುಳಲ್ಲಿ' ಮುಂತಾದ ಸಮರ್ಥವಾದ ಸಾಮಾಜಿಕ ಹಾಗೂ ವಾಸ್ತವವಾದಿ ಕಾದಂಬರಿಗಳನ್ನು ರಚಿಸಿದರು. ಒಟ್ಟಿನಲ್ಲಿ ಈ ಕಾಲದಲ್ಲಿ ಕಾದಂಬರಿ ಸಾಹಿತ್ಯ ವಿಪುಲವಾಗಿ ಹುಲುಸಾಗಿ ಬೆಳೆಯಿತೆಂದೇ ಭಾವಿಸಬಹುದು.

## ೩) ಸಾಮಾಜಿಕ ವಾಸ್ತವವಾದಿ ಕಾದಂಬರಿಗಳು:

೧೯೪೫ರ ವೇಳೆಗೆ ಭಾರತದ ಇತರ ಸಾಹಿತ್ಯಗಳ ಪ್ರಭಾವ ಕನ್ನಡದ ಮೇಲೆಯೂ ಆಯಿತು ಎಂದು ಹೇಳಬಹುದು. ಈ ಹೊಸ ಅಲೆಯ ಪ್ರಭಾವಕ್ಕೆ ಸಿಕ್ಕು ಸಾಹಿತ್ಯ ರಚನೆ ಮಾಡಿದವರು 'ಪ್ರಗತಿಶೀಲ'ರೆಂದು ಕರೆದುಕೊಂಡವರು. ಇವರು ಹುಟ್ಟುಹಾಕಿದ ಚಳುವಳಿ

'ಪ್ರಗತಿಶೀಲ' ಚಳುವಳಿಯಾಯಿತು. ಈ ಚಳುವಳಿಯ ನಾಯಕತ್ವ ವಹಿಸಿದವರೆ ಅ.ನ.ಕೃಷ್ಣರಾಯರು. ಮಾಸ್ತಿ ಮತ್ತು ಅವರನ್ನು ಅನುಸರಿಸಿದ ಸಾಹಿತಿಗಳು ಒಂದು ವರ್ಗಕ್ಕೆ ಸೇರಿದವರು ಅಂದರೆ ದಿನ ದಿನದ ಜೀವಕ್ಕೆ ಬೇಕಾಗುವುದಕ್ಕಿಂತ ಸ್ವಲ್ಪ ಹೆಚ್ಚು ಗಳಿಸುವವರನ್ನು 'ಮಧ್ಯಮವರ್ಗ' ಎಂದು ಹೇಳಬಹುದು. ಇವರ ಅಲ್ಪ ಆಸೆ, ತೃಪ್ತಿ, ಕೋಪ ತಾಪಗಳನ್ನು ಮಾಸ್ತಿ ಸಾಹಿತ್ಯ ಚಿತ್ರಿಸಿತು. ನವೋದಯ ಕಾಲದ ಕನ್ನಡ ಸಾಹಿತ್ಯದಲ್ಲಿ ಜನಪದದೊಂದಿಗೆ ಪೂರ್ಣ ಬೆರೆಯುವ ಮನೋಭಾವವಿರಲಿಲ್ಲ. ಅದ್ದರಿಂದಲೇ ಆತೃಪ್ತಿ ಹುಟ್ಟಿತು. ನವೋದಯ ಕಾಲದ ಕವಿಗಳು ನಿರ್ವಿಣ್ಣರಾಗಿ ಕುಳಿತಾಗ ಪ್ರಗತಿಶೀಲರು ಜನಕ್ಕೆ ಧೈರ್ಯ, ಸ್ಥೈರ್ಯಗಳನ್ನು ನೀಡಿದ್ದರು. ಪರಂಪರಾಗತವಾಗಿ ಮೌಢ್ಯವನ್ನು ರೂಡಿಸಿಕೊಂಡು ಬಂದಿದ್ದ ಸಾಹಿತ್ಯವನ್ನು ಪ್ರಗತಿಶೀಲರು ಖಂಡಿಸುತ್ತಾ ಬಂದರು. ಕಮ್ಯುನಿಸಂ ಚಳುವಳಿಯಿಂದ ಪ್ರಭಾವಿತರಾದವರು ಪ್ರಗತಿಶೀಲರು. ಅ.ನ.ಕೃ. ರವರ ಮೊದಲ ಕಾದಂಬರಿ 'ಜೀವನಯಾತ್ರೆ' (೧೯೩೪)ಯಲ್ಲಿ ಪ್ರತಿಭಟನೆಯ ಅಂಕುರವಿದೆ. ವ್ಯಭಿಚಾರ, ದಾಸ್ಯಗಳೆಲ್ಲದರ ಹಿಂದೆ ಹಸಿವು ಹೆಬ್ಬಾವಿನಂತೆ ಬಾಯ್ತೆರೆದು ಕುಳಿತಿದೆ ಎಂಬುದನ್ನು ತೋರಿಸಿಕೊಡಲು ಜೀವನಯಾತ್ರೆ ಉದ್ದೇಶಿಸಿದೆ ಎಂದು ಅ.ನ.ಕೃ ರವರೇ ಮುನ್ನುಡಿಯಲ್ಲಿ ಹೇಳಿದ್ದಾರೆ. 'ಸಂಧ್ಯಾರಾಗ', ಉದಯರಾಗ', ಇವುಗಳಲ್ಲಿ ಈ ಧೋರಣೆಯನ್ನು ಮುಂದುವರೆಸಿರಲಿಲ್ಲ. 'ನಗ್ನ ಸತ್ಯ' 'ಶನಿ ಸಂತಾನ' ಎಂಬ ಹಲವಾರು ಕಾದಂಬರಿಗಳು ಹೊರಬಂದವು. ಇವುಗಳ ಮೂಲ ಉದ್ದೇಶ ಸಮಾಜದ ನಗ್ನ ಸತ್ಯವನ್ನು ಬಯಲಿಗೆಳೆಯುವುದು. ಕೆಳವರ್ಗದ, ಮಧ್ಯಮವರ್ಗದ ಶೋಷಣೆ ಹೇಗೆ ನಡೆಯುತ್ತಿದೆ ಎಂದು ತೋರಿಸುವುದಾಗಿದೆ. ಪ್ರಗತಿಶೀಲ ಸಾಹಿತ್ಯದ ಪ್ರಮುಖ ಬರಹಗಾರರು ಅ.ನ.ಕೃ. ತ.ರಾ.ಸು. ಕಟ್ಟೀಮನಿ, ಮತ್ತು ನಿರಂಜನರವರು.

ಒಟ್ಟಾರೆ ಹೇಳುವುದಾದರೆ ಪ್ರಗತಿಶೀಲ ಕಾದಂಬರಿಕಾರರು ಸಾಮಾನ್ಯ ಮತ್ತು ಮಧ್ಯಮ ವರ್ಗದ ಜನಜೀವನವನ್ನು ಯಶ್ವಸಿಯಾಗಿ ಚಿತ್ರಿಸಿದರು. ಭಾಷೆಗೆ ಒಂದು ಹೊಸ ಕಸುವನ್ನು ತಂದರು. ಸಾಮಾಜಿಕ ಕಾದಂಬರಿಗಳಲ್ಲಿ ಭಾರತೀಯ ಸಂಸ್ಕೃತಿಯ ಬೆಳಕನ್ನು ಕಾಣಲು ತ.ರಾ.ಸು. ಮತ್ತು ಅ.ನ.ಕೃ. ಅಂತಹವರು ಶ್ರಮಿಸಿದರು. ಸ್ವಾತಂತ್ರ್ಯೋತ್ತರ ಭಾರತದ ಸ್ಥಿತಿಯನ್ನು ವಿಶ್ಲೇಷಿಸಿ ಕಾದಂಬರಿಗಳನ್ನು ರಚಿಸಿದರು. ಉದಾಹರಣೆಗೆ, 'ಭೂಮಿತಾಯಿ' (ಅ.ನ.ಕೃ) 'ಬೇಲಿ ಮೇಯ್ದ ಹೊಲ' (ತ.ರಾ.ಸು), 'ಮಾಡಿಮಡಿದವರು' (ಕಟ್ಟೀಮನಿ) ಮುಂತಾದ ಕಾದಂಬರಿಗಳು. ಪ್ರಗತಿಶೀಲ ಕಾದಂಬರಿಕಾರರು ರಾಷ್ಟ್ರದ ಸ್ವಾತಂತ್ರ್ಯದ ಹೋರಾಟವನ್ನು ಅನೇಕ ಕಾದಂಬರಿಗಳ ಸಾಮಾಗ್ರಿಯನ್ನಾಗಿ ಬಳಸಿದ್ದು ಕನ್ನಡ ಕಾದಂಬರಿ ಕ್ಷೇತ್ರದಲ್ಲಿ ಒಂದು ಉತ್ಸಾಹಯುತ-ಕ್ರಾಂತಿಕಾರೀ, ಪ್ರಭಾವಶಾಲೀ ಕಾದಂಬರಿಗಳನ್ನು ರಚಿಸಿದರು ಎಂದು ಹೇಳಬಹುದು.

## ೪) ಐತಿಹಾಸಿಕ ಕಾದಂಬರಿಗಳು:

ಕನ್ನಡದಲ್ಲಿ ಬಂದ ಬಹುಪಾಲು ಐತಿಹಾಸಿಕ ಕಾದಂಬರಿಗಳ ಉದ್ದೇಶ ಭಾರತೀಯರ ಮತ್ತು ಕನ್ನಡಿಗರ ಗತವೈಭವವನ್ನು ಪರಿಚಯ ಮಾಡಿಕೊಡುವುದೇ ಆಗಿತ್ತು. ಕಾದಂಬರಿಕಾರರು ನಾಡಿನ ಹಿರಿಮೆಯ ಸಂಕೇತಗಳಾದ ನೃಪತುಂಗ, ಕೃಷ್ಣದೇವರಾಯ, ಬಸವೇಶ್ವರ ಮುಂತಾದ ಹೆಸರಾಂತ ವ್ಯಕ್ತಿಗಳನ್ನು ಕೇಂದ್ರ ಪಾತ್ರಗಳನ್ನಾಗಿ ಆರಿಸಿಕೊಂಡದ್ದಲ್ಲದೆ, ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ರಚಿತವಾದ ಈ ಕಾದಂಬರಿಗಳು ಜನತೆಯಲ್ಲಿ ಹೋರಾಟದ ಕ್ರಾಂತಿಯ ಪ್ರಭಾವವನ್ನು ಮೂಡಿಸುವುದಾಗಿತ್ತು. ಆನಂದ ಕಂದರ 'ರಾಜಯೋಗಿ' ಮತ್ತು 'ಅಶಾಂತಿ ಪರ್ವಗಳು' ಇತಿಹಾಸಕ್ಕೆ ಪ್ರಾಮಾಣಿಕವಾಗಿ ಬರೆದ ಕೃತಿಗಳಾಗಿವೆ. ವಿಜಯನಗರದ ಇತಿಹಾಸನ್ನು ಹಿನ್ನಲೆಯಾಗಿಟ್ಟುಕೊಂಡು ಬರೆದ ಈ ಕಾದಂಬರಿಗಳು ಆ ಕಾಲದ ವೈಭವ ಮತ್ತು ಜೀವನವನ್ನು ಯಥಾವತ್ತಾಗಿ ಪ್ರತಿಬಿಂಬಿಸುತ್ತವೆ. ಈ ಹಿನ್ನಲೆಯಲ್ಲಿ ದೇವುಡು ಅವರ 'ಮಯೂರ' ಕಾದಂಬರಿ ಗಮನಾರ್ಹವಾದ ಕಾದಂಬರಿ ಮತ್ತು ಜನಪ್ರಿಯ ಕಾದಂಬರಿಯೂ ಆಗಿದೆ. ತ.ರಾ.ಸು. ಅವರು ಚಿತ್ರದುರ್ಗದ ಇತಿಹಾಸವನ್ನವಲಂಬಿಸಿ ಸುಮಾರು ಕಾದಂಬರಿಗಳನ್ನು ರಚಿಸಿದರು. ಅವರ ಮೊದಲ ಕಾದಂಬರಿ 'ಹಂಸಗೀತಾ' ಆ ಕಾಲದ ಒಬ್ಬ ಸಂಗೀತಕಾರನ ಕಥೆಯಾಗಿದೆ. ಅವರ ಮುಂದಿನ ಕಾದಂಬರಿಗಳಾದ 'ಕಂಬನಿಯ ಕುಯಿಲು', 'ರಕ್ತ ರಾತ್ರಿ', 'ತಿರುಗುಬಾಣ', 'ಹೊಸ ಹಗಲು', 'ದುರ್ಗಾಸ್ತಮಾನ'ಗಳನ್ನು ಈ ಹಿನ್ನಲೆಯಲ್ಲಿ ಸ್ಮರಿಸಬಹುದು. ಇವುಗಳಲ್ಲಿ ನೇರವಾಗಿ ಚಿತ್ರದುರ್ಗದ ಇತಿಹಾಸವನ್ನು ಬಳಸಿಕೊಳ್ಳಲಾಗಿದೆ. ಮದಕರಿನಾಯಕರ ವಂಶದ ಹಾಗುಹೋಗುಗಳು, ದೈವ-ದುರ್ದೈವಗಳು ಕಾದಂಬರಿಯೂದ್ದಕ್ಕೂ ವ್ಯಾಪಿಸಿವೆ

ವರ್ಣನೆ, ವಾತಾವರಣ, ಪಾತ್ರ ಸೃಷ್ಟಿಗಳಲ್ಲಿ ತ.ರಾ.ಸು ವೀರಜೀವನದ ರಕ್ತವನ್ನೇ ಹರಿಸಿದ್ದಾರೆ. ಚಿತ್ರದುರ್ಗದ ಕೋಟೆ, ಅರಮನೆ, ದೇವಾಲಯ, ನಾಯಕರು, ಯೋಧರು ಹೀಗೆ ಪ್ರತಿಯೊಂದು ವಿವರಗಳು ಸವಿಸ್ತಾರವಾಗಿ ಚಿತ್ರಿತಗೊಂಡಿವೆ.

ಕೆ.ವಿ. ಅಯ್ಯರ್‌ರವರ 'ಶಾಂತಲಾ' ಕೂಡ ಈ ಹಿನ್ನೆಲೆಯಲ್ಲಿ ಸ್ಮರಿಸಬಹುದಾಗಿದ್ದು ಅಯ್ಯರ್ ರವರ ವಿಶಿಷ್ಟ ಕಲೆಯನ್ನು ಅಭಿವ್ಯಕ್ತಿಸುತ್ತದೆ. ತ.ರಾ.ಸು. ಅವರ ಕಾದಂಬರಿಗಳಲ್ಲಿರುವಂತೆ ಇಲ್ಲಿ ಮನುಷ್ಯನ ರಾಗ ದ್ವೇಷಗಳ ವಸ್ತುವನ್ನು ಒಳಗೊಂಡಿರುವುದಿಲ್ಲ.

ಹೊಯ್ಸಳ ರಾಜ್ಯದ ಹಾಗುಹೋಗುಗಳು ಒಂದು ಕಡೆಯಾದರೆ, ಶಾಂತಲೆ, ಕುವರ, ವಿಷ್ಣು, ಲಕ್ಷ್ಮೀ, ಈ ವ್ಯಕ್ತಿಗಳ ಮಧುರ ಬಾಂಧವ್ಯದ ಅಂತರಂಗದ ಇತಿಹಾಸವೊಂದು ಬೇರೆಯಾಗಿದೆ. ಐತಿಹಾಸಿಕ ಕಾದಂಬರಿಗಳನ್ನು ರಚಿಸಿದ ಕಾದಂಬರಿಕಾರರಲ್ಲಿ ಮಾಸ್ತಿ ಮತ್ತು

ನಿರಂಜನರು ಪ್ರಮುಖರಾಗಿದ್ದಾರೆ. ಮಾಸ್ತಿಯವರ ಎರಡು ವಿಶಿಷ್ಟ ಐತಿಹಾಸಿಕ ಕಾದಂಬರಿಗಳೆಂದರೆ 'ಚೆನ್ನಬಸವನಾಯಕ' ಮತ್ತು 'ಚಿಕ್ಕವೀರರಾಜೇಂದ್ರ'. ನಿರಂಜನರು ಕಲ್ಯಾಣ-ಸ್ವಾಮಿ' ಮತ್ತು 'ಸ್ವಾಮಿ ಅಪರಂಪಾರ' ಕಾದಂಬರಿಗಳಲ್ಲಿ ಸ್ವಾತಂತ್ರ್ಯಕ್ಕಾಗಿ ಹೋರಾಡಿದ ಇಬ್ಬರು ವೀರರ ಕಥೆಗಳನ್ನು ರಚಿಸಿದ್ದಾರೆ. ಇವು ಕಲಾತ್ಮಕವಾಗಿದ್ದು ಐತಿಹಾಸಿಕವಾದ ವಿಶಿಷ್ಟ ದೃಷ್ಟಿಕೋನವನ್ನು ಹೊಂದಿವೆ. ಅದನ್ನು ಹೀಗೆ ಹೇಳಿದ್ದಾರೆ- 'ಇತಿಹಾಸದ ನಿರ್ಮಾತೃಗಳು ಸಾಮಾನ್ಯ ಜನರೇ' ಎಂಬ ಸಾರ್ವಕಾಲಿಕ ಸತ್ಯವನ್ನು ತಮ್ಮ ಕಾದಂಬರಿಯ ನಿರೂಪಣೆಗೆ ಆಧಾರವನ್ನಾಗಿ ಮಾಡಿಕೊಂಡಿರುವುದನ್ನು ಕಾಣಬಹುದು.

ಆಧುನಿಕ ಕನ್ನಡ ಸಾಹಿತ್ಯದಲ್ಲಿ ಇಂದು ಕಾದಂಬರಿ ವಿಶಿಷ್ಟ ಸ್ಥಾನ ಪಡೆದಿದೆ. ಇತರ ಸಾಹಿತ್ಯ ಪ್ರಕಾರಗಳನ್ನೂ ಕಾದಂಬರಿ ಮೂಲೆಗೊತ್ತಿ ತಾನು ತಲೆಯೆತ್ತಿ ನಿಂತಿದೆಯೆಂದರೂ ತಪ್ಪಾಗಲಾರದು. ಕಾದಂಬರಿ ಎಂದರೆ ಹೆಂಡ, ಮದ್ಯ ಎಂದರ್ಥ. ಅದರ ಕುಡಿತವು ಹೇಗೆ ಮೈ ಮರೆಸುತ್ತದೆಯೋ ಹಾಗೆಯೇ ಕಾದಂಬರಿಯು ಮೈಮರೆಸುವುದರಿಂದ ಈ ಸಾಹಿತ್ಯ ಪ್ರಕಾರಕ್ಕೆ ಈ ಹೆಸರು ಹೊಂದಿಕೆಯಾಗುತ್ತದೆಂದು ಕಾಣುತ್ತದೆ. ಕನ್ನಡ ಕಾದಂಬರಿಯ ಇತಿಹಾಸ ಕಾಲು ಶತಮಾನದ ಹಿಂದಕ್ಕೆ ಹೋಗುವುದಿಲ್ಲ ಅದರ ಹಿಂದಿನ ಸುದೀರ್ಘ ಚಂಪೂ, ಷಟ್ಪದಿ, ಸಾಂಗತ್ಯ, ಕಾವ್ಯಗಳನ್ನು ಕಾದಂಬರಿಗಳೆಂದು ನಾವು ಪರಿಗ್ರಹಿಸುವುದಾದರೆ ಕನ್ನಡ ಕಾದಂಬರಿಯ ಇತಿಹಾಸವನ್ನು ಆದಿಪಂಪನಿಂದ ಗುರುತಿಸಬೇಕಾಗುತ್ತದೆ.[೩] ಆದರೆ ಇಂದು ಕಾದಂಬರಿ ಶಬ್ದವನ್ನು ನಾವು ಒಂದು ವಿಶಿಷ್ಟಾರ್ಥದಲ್ಲಿ ಬಳಸುತ್ತಿದ್ದೇವೆ. ಅದು ಸಮಕಾಲೀನ ಜೀವನಚಿತ್ರದ ಅನುಭವವನ್ನು ಸವಿಸ್ತಾರವಾಗಿ ನಿರೂಪಿಸಬೇಕೆಂದು ಅಪೇಕ್ಷಿಸುತ್ತದೆ.

---

೩. ಅ.ನ.ಕೃಷ್ಣರಾಯ ಸಾಹಿತ್ಯ ಮತ್ತು ಯುಗಧರ್ಮ: ಪುಟ ಸಂಖ್ಯೆ ೪೦: ಸಾಗರ್ ಪ್ರಕಾಶನ ೧೯೫೨

# ಅಧ್ಯಾಯ–೩

## ಕಾದಂಬರಿ ಸಾಹಿತ್ಯದಲ್ಲಿನ ಸ್ತ್ರೀ ಸಂವೇದನೆ

ಆಧುನಿಕ ಕನ್ನಡ ಸಾಹಿತ್ಯದ ಕಾಲಘಟ್ಟದಲ್ಲಿ ಉತ್ತಮವಾದ ಸಾಹಿತ್ಯದ ಹೊಳೆಯು ಹರಿದಿದ್ದು, ಇದರಿಂದ ಕನ್ನಡ ಸಾಹಿತ್ಯವು ಶ್ರೀಮಂತಗೊಳ್ಳಲು ಕಾರಣವಾಯಿತು. ಇಂತಹ ಶ್ರೀಮಂತಿಕೆಗೆ ಕನ್ನಡ ಸಾಹಿತ್ಯದ ಎಲ್ಲಾ ಪ್ರಕಾರಗಳು ಕಾರಣೀಭೂತವಾಗಿವೆ. ಜನಸಾಮಾನ್ಯರ ಆಸೆ–ಆಕಾಂಕ್ಷೆಗಳನ್ನು ನೋವು–ನಲಿವುಗಳನ್ನು, ದು:ಖ–ದುಮ್ಮಾನಗಳನ್ನು ಕಣ್ಣಿಗೆ ಕಟ್ಟಿದ ಹಾಗೆ ಮನೋಜ್ಞವಾಗಿ ಚಿತ್ರಿಸುವಲ್ಲಿ ಕಾದಂಬರಿಗಳು ಯಶಸ್ವಿಯಾಗಿವೆ. ಹೀಗಾಗಿ ಸಾಹಿತ್ಯ ಕ್ಷೇತ್ರಕ್ಕೆ ಕಾದಂಬರಿಗಳ ಕೊಡುಗೆ ಅಪಾರವಾಗಿದೆ.

ಕನ್ನಡ ಸಾರಸ್ವತ ಲೋಕದ ಬಹುತೇಕ ಕಾದಂಬರಿಗಳ ಮುಖ್ಯ ವಸ್ತು ಹೆಣ್ಣು. ತಾಯಿಯಾಗಿ, ಅಕ್ಕನಾಗಿ, ಚಿಕ್ಕಮ್ಮನಾಗಿ, ದೊಡ್ಡಮ್ಮನಾಗಿ, ತಂಗಿಯಾಗಿ, ಅತ್ತಿಗೆಯಾಗಿ, ನಾದಿನಿಯಾಗಿ, ಅಜ್ಜಿಯಾಗಿ, ಹೆಂಡತಿಯಾಗಿ ಹೀಗೆ ಹಲವಾರು ಪಾತ್ರಗಳನ್ನು ಏಕಕಾಲದಲ್ಲಿ ಸಮರ್ಥವಾಗಿ ನಿಭಾಯಿಸುವ ಹೆಣ್ಣು, ಎಲ್ಲಾ ಕೆಲಸಗಳಲ್ಲೂ ತನ್ನದೆ ಆದ ಛಾಪನ್ನು ಮೂಡಿಸಿರುವುದನ್ನು ಕಾಣುತ್ತೇವೆ. ಅವಳನ್ನೇ ಅವಲಂಭಿಸಬೇಕಾದ ಪರಿಸ್ಥಿತಿ ಇರುವ ಈ ಕಾಲಘಟ್ಟದಲ್ಲೂ ಅವಳು ಮಿತಿಗಳಲ್ಲೇ ಬೆಳೆಯಬೇಕಾದ ಅನಿವಾರ್ಯತೆಯಿದ್ದು ಅದನ್ನು ಕಾದಂಬರಿಗಳು ಸಹ ಯಥಾವತ್ತಾಗಿ ದಾಖಲಿಸಿರುವುದನ್ನು ಕಾಣುತ್ತೇವೆ.

ಆಧುನಿಕ ಕನ್ನಡ ಸಾಹಿತ್ಯದ ಮೊದಲ ಲೇಖಕಿಯಾದ ನಂಜನಗೂಡು ತಿರುಮಲಾಂಬ ಅವರು ಪ್ರಕಾಶಕಿಯಾಗಿ, ಸಮಾಜ ಸೇವಕಿಯಾಗಿ, ಸೃಜನಶೀಲ ಲೇಖಕಿಯಾಗಿ ಹೆಸರು ಪಡೆದಿರುವ ಅವರು ಲೇಖನ ಕಲೆಯಲ್ಲಿ ಮಹಿಳೆಯರು ಹಿಂದಿದ್ದ ಆ ಸಂದರ್ಭದಲ್ಲಿ ಎಲ್ಲರೂ ತೊಡಗುವಂತೆ ಮಾಡಿ ಸಾಮಾಜಿಕ ಪ್ರಗತಿಗೆ ಕಾರಣರಾದವರು. ಬಾಲ್ಯದಲ್ಲೇ ವಿವಾಹವಾಗಿ ಹನ್ನೆರಡನೇ ವಯಸ್ಸಿಗೆ ವಿಧವೆಯಾದ ತಿರುಮಲಾಂಭರವರು ಪತ್ರಕರ್ತೆಯಾಗಿಯು ಗುರುತಿಸಿಕೊಂಡಿರುವರು. ಸಮಾಜ ಸೇವಾಕರ್ತೆಯ ಜವಬ್ದಾರಿಯನ್ನು ಹೊತ್ತುಕೊಂಡು ಕಾದಂಬರಿಗಳನ್ನು ರಚಿಸಿದರು. ವರದಕ್ಷಿಣೆ, ವಧೂದಹನ, ಬಾಲ್ಯ ವಿವಾಹ, ವೇಶ್ಯಾ ಸಮಸ್ಯೆ ಮುಂತಾದ ಅಂದಿನ ಕಾಲದ ಹೆಣ್ಣಿನ ಬದುಕಿನಲ್ಲಿ ನಡೆದ ಅಪಸ್ವರದ ಚಿತ್ರಣಗಳನ್ನು ಮಾಡಲಾಗಿದೆ. 'ಸುಶೀಲೆ' 'ನಭಾ' 'ವಿರಾಗಿಣಿ' 'ಗಿರಿಜಾಬಾಯಿ' ಮೊದಲಾದ ಹನ್ನೆರಡು ಕಾದಂಬರಿಗಳನ್ನು ರಚಿಸಿದ್ದಾರೆ. ಮೇಲಿನ ಎಲ್ಲಾ ಕಾದಂಬರಿಗಳಲ್ಲೂ ಹೆಣ್ಣು ಸಂಪ್ರದಾಯದ ಭಾರದಡಿ ನರಳುತ್ತಾ ಹೊಸ ಗಾಳಿಗೆ ತುಡಿಯುವ ಕಾತರತೆ ವ್ಯಕ್ತವಾಗಿರುವುದನ್ನು ಕಾಣುತ್ತೇವೆ. ಮಹಿಳೆಯರ ಕತೆ ಕನ್ನಡದಲ್ಲಿ ನೆಲೆಗೊಂಡಿದ್ದು ಇಪ್ಪತ್ತನೆಯ ಶತಮಾನದಲ್ಲಿಯೇ ಎನ್ನುವುದು ನಿರ್ವಿವಾದ. ತಿರುಮಲಾಂಬಾರವರ ಕಾದಂಬರಿಗಳು ಸಾಮಾಜಿಕವಾಗಿದ್ದರೆ ಕತೆಗಳೆಲ್ಲ ಪೌರಾಣಿಕವಾದವು.[೧]

---

೧. ಜಿ.ಎಸ್.ಆಮೂರ: ಕನ್ನಡ ಕಥನ ಸಾಹಿತ್ಯ ಸಣ್ಣಕತೆ. ಪುಟಸಂಖ್ಯೆ :೩೨೫: ಪ್ರಿಯದರ್ಶಿನಿ ಪ್ರಕಾಶನ–೨೦೦೩

ಹೊಸಗನ್ನಡದಲ್ಲಿ ಬರುವ ಮೊದಲ ಲೇಖಕಿಯರಾದ ತಿರುಮಲಾಂಭ ಮತ್ತು ಕಲ್ಯಾಣಮ್ಮನವರ ಬರಹಗಳಲ್ಲಿನ ಸಾಮ್ಯ ಗಮನಿಸಿದಾಗ ದ್ವಂದ್ವದಲ್ಲಿ ಕೂಡಿದ ಮನಸ್ಸುಗಳ ಚಿತ್ರಣವನ್ನು ಇಬ್ಬರೂ ಮಾಡಿದ್ದಾರೆ. ನಾಯಕಿಯು ಸನ್ನಡತೆಯವಳು, ಸುಶಿಕ್ಷಿತಳೂ ಆಗಿ ಸನಾತನ ಸಂಸ್ಕೃತಿಯನ್ನು ಬಿಂಬಿಸುವ ಮಾದರಿಯಾಗಿದ್ದಾಳೆ. ತಿರುಮಲಾಂಭರವರ ಕಾದಂಬರಿಗಳಲ್ಲಿನ ಸ್ತ್ರೀ, ಶಿಕ್ಷಣವನ್ನು ಪಡೆದು ಎಚ್ಚೆತ್ತ ಪ್ರಜ್ಞೆಯ ಹೊಳಹುಗಳಲ್ಲಿ ನಿಲ್ಲುತ್ತಾಳೆ. ಸನಾತನದಿಂದಲೂ ಮೂಲೆಗೊತ್ತಲ್ಪಟ್ಟು ಗಂಡಸರ ಸಮರ್ಥನೆಯಲ್ಲಿ ಮುನ್ನಡೆಯುತ್ತಿರುವ ಸ್ತ್ರೀ ಶೋಷಣೆಯನ್ನು, ಎಚ್ಚೆತ್ತ ಪ್ರಜ್ಞೆಯ ಪಾತ್ರಗಳು ಇಂದು ಪ್ರಶ್ನಿಸುತ್ತಿವೆ. ದಿಟ್ಟತನದಿಂದಲೂ ವಿರೋಧಿಸುತ್ತಿವೆ. "ತಿರುಮಲಾಂಭಾರವರ 'ಮಾತೃನಂದಿನಿ' ಕಾದಂಬರಿಯ ನಂದಿನಿ ಪಾತ್ರ ಸನಾತನಿಗಳೊಡನೆ ವಾದ ಹೂಡಿ ಗೆಲ್ಲುವುದನ್ನು 'ನಂದಿನಿ ಜಯಲಾಭ' ವೆಂಬ ಇಡೀ ಅಧ್ಯಾಯವು ನಿರೂಪಿಸುತ್ತದೆ. ಹದಿನಾರು ವರ್ಷ ಮೀರಿದರೂ ಮದುವೆಯಾಗದೆ ಉಳಿದುದಕ್ಕಾಗಿ ಊಟಕ್ಕೆ ಬಂದ ಸನಾತನಿಗಳಿಂದ ಆಕೆ ಕಟುವಿಮರ್ಶೆಗೆ ಒಳಗಾಗುತ್ತಾಳೆ. ಹೆಣ್ಣು ಮಕ್ಕಳನ್ನು ಕಾಡುಮೃಗಗಳಂತೆ ಕಂಡು ಕ್ರೂರವಾಗಿ ದಂಡಿಸುತ್ತಿರುವ ಸಾಂಪ್ರಾದಾಯಿಕ ಸಮಾಜವನ್ನು ನಂದಿನಿ ಕಟುವಾಗಿ ವಿಮರ್ಶಿಸುತ್ತಾಳೆ. ಇಲ್ಲಿನ ನಂದಿನಿ ಸಮಾಜದ ಲೋಪದೋಷಗಳನ್ನು ಹೇಳಲು ಹಿಂದೆ ಸರಿಯುವುದಿಲ್ಲ. ತಿರುಮಲಾಂಭ ರವರ ಕಾದಂಬರಿಗಳು ಸಾಮಾನ್ಯವಾಗಿ ಮದುವೆಯನ್ನು ವಿರೋಧಿಸುತ್ತವೆ. ವರದಕ್ಷಿಣೆಯನ್ನು ಕೊಡುವುದು, ಆ ಸಂದರ್ಭದಲ್ಲಿ ಹುಡುಗಿಯ ತಂದೆ ತಾಯಿಗಳು ಪಡುವ ವೇದನೆ ಹಾಗು ಮದುವೆಯ ಸಂದರ್ಭದಲ್ಲಿ ಮಾಡುವ ಆಡಂಬರಗಳನ್ನು ವಿರೋಧಿಸುವ ಕೆಲವು ಮುಖ್ಯ ಪಾತ್ರಗಳು ಮದುವೆಯಾಗದೆ ಉಳಿದು ದೇಶ ಸೇವೆಯ ವ್ರತವನ್ನು ಆದರ್ಶವಾಗಿ ಆಯ್ಕೆ ಮಾಡಿಕೊಳ್ಳುವ ಸ್ತ್ರೀಯರನ್ನು ಕಾಣಬಹುದು. ತನ್ನ ನಿಜಜೀವನದಲ್ಲಿ ತಾನು ಸ್ವತಃ ಅನುಭವಿಸಿದ ಕಷ್ಟಗಳು ವೈಧವ್ಯದ ಸಮಸ್ಯೆಗಳು 'ನಭಾ' ಮತ್ತು 'ವಿರಾಗಿಣಿ' ಕಾದಂಬರಿಗಳಲ್ಲಿ ಅಲ್ಲಲ್ಲಿ ಇಣುಕುತ್ತವೆ."[೨]

ಬಡತನದಿಂದ ಕೂಡಿದ ಸಂಸಾರ ಸಮಾಜದ ಕಾಮುಕ ಪುರುಷ ಸಂಬಂಧಿಗಳ ಕ್ರೌರ್ಯ, ಒಳಸಂಚು, ಸ್ತ್ರೀಯರಿಂದಲೇ ಮಾತ್ಸರ್ಯಕ್ಕೆ ಒಳಗಾಗಿ ಅವುಗಳನ್ನು ದಿಟ್ಟವಾಗಿ ಎದುರಿಸಿದ ಸಾಹಸದ ಕಥೆಯೇ 'ನಭಾ' ಮತ್ತು 'ವಿರಾಗಿಣಿ' ಕಾದಂಬರಿಗಳು. ಮರುಮದುವೆಯಾಗದೆ ವಿರಾಗಿಣಿ ವ್ರತದಿಂದ ಇದ್ದ ಹೆಣ್ಣನ್ನು ಪುರುಷ ಪ್ರಧಾನ ಸಮಾಜ ಯಾವ ರೀತಿ ಕ್ರೌರ್ಯವಾಗಿ ನಡೆಸಿಕೊಳ್ಳುತ್ತದೆ ಎನ್ನುವ ವಿವರಗಳನ್ನು ಈ ಕಾದಂಬರಿಗಳು ಸಮರ್ಥವಾಗಿ ಬಿಂಬಿಸುತ್ತವೆ. ನವೋದಯ ಕಾಲದಲ್ಲಿ ಪ್ರಕಟವಾಗಿರುವ ಕಾದಂಬರಿಗಳು ಸಹ ಸ್ತ್ರೀಯ ಸತ್ವವನೇ ಸಂಕೇತಿಸುತ್ತವೆ. ಬೇಂದ್ರೆ ಅವರ ಕಾವ್ಯನಾಮವಾದ 'ಅಂಬಿಕಾತನಯ'ತ್ವವು ಈ ಸಂಕೇತದಿಂದಲೇ ಮೂಡಿಬಂದಿದ್ದು.

---

೨. ಕನ್ನಡ ಸಾಹಿತ್ಯದ ಹಿನ್ನಲೆ ಪ್ರೇರಣೆ ಮತ್ತು ಪ್ರಭಾವ– –ಪುಟ–೨೦ ಮೈಸೂರು ವಿಶ್ವವಿದ್ಯಾಲಯ ೨೦೦೪

ಸಮಾಜದ ಹೊರಜಗತ್ತಿನಲ್ಲಿ ದುಡಿದು ದಣಿದು ವ್ಯಾವಹಾರಿಕ ಮಾಯೆಯಲ್ಲಿ ಸಿಲುಕಿದ ಪುರುಷನಿಗೆ ಮನೆಯಲ್ಲಿ ಸಾಂತ್ವನದ ವಾತಾವರಣವನ್ನು ನಿರ್ಮಿಸಿ ಕೊಡುವುದು ಸ್ತ್ರೀ ಪಾತ್ರಗಳೇ. ಬೇಂದ್ರೆಯವರ 'ಸಖೀಗೀತ'ದ ಸಖಿ, ಮನದನ್ನೆ, ಕಾಮಾಕ್ಷಿಯರು; ರಾಜರತ್ನಂರ ಮಲ್ಲಿ, ಪುಟ್ನಂಜಿಯರು; ಕಾರಂತರ ಕಾದಂಬರಿಗಳ ಮಾಗಿದ ಜೀವನಾನುಭವವುಳ್ಳ ಶ್ರಮಜೀವಿ ಮಹಿಳೆಯರು ಇವರೆಲ್ಲ ಸುಶಿಕ್ಷಿತರೇ ಆದರೂ ಶಿಕ್ಷಣದಿಂದ ವಂಚಿತರು. ಶಿಕ್ಷಣವೆಂಬುದು ಪಾಶ್ಚಾತ್ಯ ಸಂಸ್ಕೃತಿಯ ಮಾದರಿಯೆಂದು, ಅದನ್ನು ಭೋಗ ಸಂಸ್ಕೃತಿಯ ಪ್ರತಿನಿಧಿ ಎಂದೂ ತಿರಸ್ಕರಿಸಿದ ಪುರಷರು ಅದಕ್ಕೆ ಎದುರಾಗಿ ಆಕೆಯನ್ನು ಸಹನೆ, ಕ್ಷಮೆ, ದಯೆ, ಪ್ರೇಮ, ತ್ಯಾಗ ವೈರಾಗ್ಯಗಳನ್ನು ಅಂತರಂಗದ ಸತ್ವವಾಗಿಸಿಕೊಳ್ಳಲು ಹೇಳಬೇಕೆಂಬ ಭಾವಪುರುಷದಲ್ಲಿದ್ದು, ಅಂತಹ ಸ್ತ್ರೀ ಮಾದರಿಗಳನ್ನೆ ನಿರೀಕ್ಷಿಸುತ್ತದೆ. ಅಲ್ಪಸ್ವಲ್ಪ ವಿದ್ಯಾಭ್ಯಾಸವನ್ನು ಪಡೆದರೆ ಅದು ಪುರುಷರು ಕಲ್ಪಿಸಿಕೊಟ್ಟ ಉದಾರ ಮನಸ್ಸಿನ ಕೊಡುಗೆ ಎಂಬುದಾಗಿ ಸಮಾಜ ಸುಧಾರಣಾ ಚಟುವಟಿಕೆಗಳು ಬಿಂಬಿಸುವಂತಿದ್ದವು. ತಿರುಮಲಾಂಬ ಅವರ 'ಸುಶೀಲೆ' ಕಾದಂಬರಿಯಲ್ಲಿನ ನಾಯಕಿ ಸುಶೀಲೆ ಪತ್ರಿಕೆಯನ್ನು ಓದುತ್ತಾಳೆಂದು ಅತ್ತೆಯ ಟೀಕೆಗೆ ಒಳಗಾಗುವ ಸಂದರ್ಭವನ್ನು ಚಿತ್ರಿಸಿದ್ದಾರೆ.

ಆರ್. ಕಲ್ಯಾಣಮ್ಮನವರು ತಿರುಮಲಾಂಭಾರವರಿಗಿಂತ ಒಂದು ಹೆಜ್ಜೆ ಮುಂದಿದ್ದಾರೆ. ಅವರ ಕಾದಂಬರಿಗಳು ಶಿಕ್ಷಣದ ಮಹತ್ವವನ್ನು ತಿಳಿಸುತ್ತಾ ಸ್ತ್ರೀ ಶಿಕ್ಷಣದ ಅವಶ್ಯಕತೆ, ಮರುವಿವಾಹದ ಅಗತ್ಯ ಇತ್ಯಾದಿಗಳ ಬಗೆಗೆ ಸ್ತ್ರೀ ಪರವಾದ ನಿಲುವುಗಳನ್ನು ತಿಳಿಸುತ್ತವೆ. ಅವರ 'ನಿರ್ಭಾಗ್ಯ ವನಿತೆ' ಕಾದಂಬರಿಯು ವಿಧವಾ ಪುನರ್ವಿವಾಹದ ಆದರ್ಶಗಳನ್ನು ಒಳಗೊಂಡ ಕಾದಂಬರಿಯಾಗಿದೆ. ಅಸಮ ದಾಂಪತ್ಯಕ್ಕೀಡಾದ ಸುಂದರೇಶ-ಇಂದಿರೆಯರು ಇಲ್ಲಿನ ಕಥಾ ನಾಯಕ ನಾಯಕಿಯರು ವಿಧುರ ಹಾಗು ವಿಧವೆಯರಾದ ನಂತರ ಇವರಿಬ್ಬರೂ ಪುನರ್ವಿವಾಹವಾಗುವ ಕತೆ ಇದು. ಸಕೇಶಿಯಾಗೇ ಉಳಿದು, ಓದುಬರಹ ಮುಂತಾದ ಚಟುವಟಿಕೆಗಳಲ್ಲಿ ತೊಡಗಿ ಜೀವನ ಕಳೆಯುತ್ತಿರುವಾಗ ಇಂದಿರೆ ಸಮಾಜದ ಕಟುಟೀಕೆ, ಹಿಂಸೆ, ಕಾಮುಕರ ಕಿರುಕುಳಕ್ಕೆ ಒಳಗಾಗಬೇಕಾಗುತ್ತದೆ. ಇವರಿಬ್ಬರೂ ಒಪ್ಪಿ ಶಾಸ್ತ್ರೀಯವಾಗಿ ಸನಾತನಿಗಳಿಂದಲೇ ವಿಧವಾ ಪುನರ್ವಿವಾಹಕ್ಕೆ ಒಪ್ಪಿಗೆ ಪಡೆಯಲು ಪ್ರಯತ್ನಿಸಿ ವಿಫಲರಾಗುತ್ತಾರೆ. ಕೊನೆಗೆ ಬ್ರಹ್ಮ ಸಮಾಜದಲ್ಲಿ ನಾಯಕ ನಾಯಕಿಯರು ವಿವಾಹವಾಗುವುರೊಂದಿಗೆ ಕತೆ ಸುಖಾಂತ್ಯವಾಗುತ್ತದೆ.[೩]

೩. ಎಸ್. ವಿ. ಪ್ರಭಾವತಿ: ಸ್ತ್ರೀವಾದದ ಪ್ರಸ್ತುಕತೆ: ಪುಟ ೧೨, ಭಾರತೀಯ ಸಂಸ್ಕೃತಿ ವಿದ್ಯಾಪೀಠ ೨೦೦೦

ಬಿ.ಟಿ.ಕೃಷ್ಣ ಅವರ ಹೆಂಡತಿ ಎಂದೇ ಪ್ರಸಿದ್ಧರಾದ ಕೊಡಗಿನ ಗೌರಮ್ಮ ತಮ್ಮ ಜೀವಿತದ ಅಲ್ಪಾವಧಿಯಲ್ಲಿ ಇಪ್ಪತ್ತಕ್ಕೂ ಮಿಗಿಲಾದ ಕಥೆ, ಕಾದಂಬರಿಗಳನ್ನು ಬರೆದವರು. ಅದರಲ್ಲಿ ಮುಖ್ಯವಾದ ಒಂದು ಕಾದಂಬರಿ, 'ಪುನರ್ ವಿವಾಹ' ಎಂಬುದು. ಇದರ ಶೀರ್ಷಿಕೆಯ ಹೆಸರೇ ಸೂಚಿಸುವಂತೆ ಒಬ್ಬ ವಿಧವೆಯ ಬಗೆಗಿಸ ಕತೆ ಅವಳ ಜಿಗುಪ್ಸೆಗಳು, ಸಮಾಜದ ಕೆಟ್ಟ ಕಣ್ಣುಗಳು, ತಿರಸ್ಕಾರಗಳು, ಮರು ವಿವಾಹಕ್ಕೆ ಎದುರಾಗುವ ಅಡೆತಡೆಗಳ ವಿವಿಧ ಮಜಲುಗಳನ್ನು ಚಿತ್ರಿಸಿದ್ದರೂ ಅಂತಿಮವಾಗಿ ಅವಳ ಪುನರ್ ವಿವಾಹಕ್ಕೆ ಲೇಖಕಿಯ ವಿರೋಧ ವ್ಯಕ್ತವಾಗಿರುವ ಧ್ವನಿಯನ್ನು ಗುರುತಿಸಬಹುದು.

ಇನ್ನು ತಮ್ಮ 'ಚಂಡಶಾಸನ' ಪದ್ಯದ ಸ್ತ್ರೀವಾದೀ ನಿಲುವುಗಳಿಂದಲೇ ಗಮನ ಸೆಳೆದ ಬೆಳಗೆರೆ ಜಾನಕಮ್ಮ ಇವರಿಗೆ ಸಮಕಾಲೀನರಾಗಿಯೇ ಬರೆದ ಮುಕಾಂಬಿಕಮ್ಮ, ಗಿರಿಬಾಲೆ, ಶ್ಯಾಮಲಾದೇವಿ, ಹೆಚ್.ಎಸ್.ಕಾತ್ಯಾಯಿನಿ, ಸರಸ್ವತಿ ದೇವಿಗೌಡರು ತಿರುಮಲೆ ರಾಜಮ್ಮ ಎಚ್.ವಿ. ಸಾವಿತ್ರಮ್ಮ ಮುಂತಾದವರು ಕೂಡ ತಮ್ಮ ಕಾದಂಬರಿಗಳಲ್ಲಿ ಹೆಣ್ಣಿನ ಜೀವನದ ವಿವಿಧ ಮಜಲುಗಳನ್ನು ಸಂಸಾರದ ಸೆಳೆತಕ್ಕೆ ಸಿಕ್ಕಿ ಅನುಭವಿಸುವ ಹಲವಾರು ತುಮುಲಗಳನ್ನು ಕಣ್ಣಿಗೆ ಕಟ್ಟಿದಂತೆ ಚಿತ್ರಿಸಿದ್ದಾರೆ. ಇವರೆಲ್ಲರ ಸಾಹಿತ್ಯವು ಸ್ತ್ರೀ ಕೇಂದ್ರಿತವಾದುದು. ಹೆಣ್ಣಿನ ಬದುಕನ್ನು ಹೆಣ್ಣಿನ ಅನುಭವದ ದೃಷ್ಟಿಯಿಂದ ನೋಡಿದಾಗ ದಕ್ಕುವ ಒಳನೋಟಗಳನ್ನು ಇವರ ಸಾಹಿತ್ಯವು ಬಿಂಬಿಸುತ್ತದೆ. ಪುನರ್ ವಿಮರ್ಶೆಯಾಗಲಿ, ಪ್ರತಿರೋಧವಾಗಲಿ ನೇರ ಹಾಗು ಸ್ಪಷ್ಟವಾಗಿರದೆ ಪರೋಕ್ಷವೂ ಸೂಚ್ಯವೂ ಆಗಿರುವುದನ್ನು ಗಮನಿಸಬಹುದಾಗಿದೆ.

ಆರ್. ಕಲ್ಯಾಣಮ್ಮನವರಂತೆಯೇ ಸಾಮಾಜಿಕ ವಲಯದಲ್ಲಿ ತಮ್ಮನ್ನು ಸೃಜನಶೀಲವಾಗಿ ತೊಡಗಿಸಿಕೊಂಡವರು-ಶ್ಯಾಮಲಾದೇವಿ ಬೆಳಗಾಂವ್‌ಕರ. ಜಯಕರ್ನಾಟಕ ಪತ್ರಿಕೆಯ ಸಂಪಾದನೆ, ಪ್ರಕಾಶನ ಈ ಎಲ್ಲಾ ಕೆಲಸಗಳನ್ನು ನಿಭಾಯಿಸಿದವರು. ತಮ್ಮ ಸಾಹಿತ್ಯದಲ್ಲಿ ಹೆಚ್ಚಾಗಿ ಇಣುಕುವ ಸ್ತ್ರೀಯ ಪಾತ್ರಗಳು ಬಾಲವಿಧವೆ, ವಿಧವಾ ವಿವಾಹ ಮುಂತಾದ ಸುಧಾರಣೆಯ ಯತ್ನವನ್ನು ಮೀರಿನಿಂತ ಸ್ತ್ರೀ ಸಮಸ್ಯೆಗಳನ್ನು ವಿಶ್ಲೇಷಣೆಗೆ ಒಳಪಡಿಸುತ್ತಾರೆ. ತಮ್ಮವರಿಂದಲೇ ಕಷ್ಟಗಳಿಗೆ ಬಿದ್ದು ಬೇಯುವುದು, ತಮ್ಮ ಸಂಬಂಧಿಗಳಿಂದಲೇ ವೇಶ್ಯಾ ಜೀವನಕ್ಕೆ ದೂಡಿಸಿಕೊಂಡ ಹೆಣ್ಣುಗಳ ಬವಣೆಯನ್ನು 'ಕರುಳಕತ್ತರಿ' 'ತಾಯಿ ಮಾತಾಯಿ' 'ಸ್ನೇಹದರ್ಶನ' ಕಾದಂಬರಿಗಳು ಹಿಡಿದಿಟ್ಟಿವೆ. ತಮ್ಮ ಕೈ ಮೀರಿ ಹೋದ ಪ್ರಸಂಗಗಳಲ್ಲಿ ಈ ಕಥೆಯ ನಾಯಕಿಯರು ಪಾರಾಗಲು ಹೋರಾಡುವ ಕಥನಗಳಾಗಿವೆ. ಇತರೆ ಕಾದಂಬರಿಗಳಲ್ಲಿ ಹೆಚ್ಚಾಗಿ ಚಿತ್ರಿತಗೊಂಡಿರುವುದು ಆಧುನಿಕ ಸಮಾಜದಲ್ಲಿ ಇರುವ ವಿಷಮವಾದ ಆಡಂಬರದ ವಿವಾಹಗಳು ವರದಕ್ಷಿಣೆಯ ಸಮಸ್ಯೆಗಳು ಇತ್ಯಾದಿಯಾದಂತಹ ಹೆಣ್ಣಿನ ಸಮಸ್ಯೆಗಳನ್ನು ಚಿತ್ರಣ ಮಾಡಲಾಗಿದೆ.[೪]

---

೪. ಮಹಿಳಾ ಸಾಹಿತ್ಯ: ಪಿಪಿಧ ದೃಷ್ಟಿ, ಧೋರಣೆಗಳು (ವಿಮರ್ಶೆ) ಮಾನಸ ಗಂಗೋತ್ರಿ ಮೈಸೂರು-ಪುಟ-೨೩

ಮತ್ತೊಂದು ವರ್ಗದ ಜನ ಸೃಜನಾತ್ಮಕ ಕಾದಂಬರಿಗಳನ್ನು ಸೃಷ್ಟಿಸುವಾಗ ಪುಟಗಳನ್ನು ಹೆಚ್ಚಿಸುವುದಕ್ಕಾಗಿ ಬರೆದದ್ದುಂಟು. ಅಂತಹ ಸಂದರ್ಭದಲ್ಲೂ ಉತ್ತಮ ಕಾದಂಬರಿಗಳನ್ನೂ ನೀಡಿದವರು ತ್ರಿವೇಣಿಯವರು. ಸ್ತ್ರೀ ಪಾತ್ರಗಳನ್ನೇ ಹೆಚ್ಚಾಗಿ ಸೃಷ್ಟಿಸಿ ಪುರುಷ ದ್ವೇಷಿ ಎಂಬುದನ್ನು ತಮ್ಮ ಕಾದಂಬರಿಗಳಲ್ಲಿ ಬಿಂಬಿಸಿದ್ದಾರೆ. ಶೌರ್‍ಯದ ಜೊತೆಗೆ ಕ್ರೌರ್‍ಯದ ಕಠೋರತೆ ಪುರುಷನಲ್ಲಿ ತುಂಬಿರುವುದನ್ನು ತ್ರಿವೇಣಿಯವರ 'ಕೀಲುಗೊಂಬೆ' ಕಾದಂಬರಿ ದಾಖಲಿಸುತ್ತದೆ. ವೇದಗಳ ಕಾಲ್ಲದಲ್ಲಿಯ ವಿದ್ವಾಂಸರು ಮಗಳನ್ನು ಕೋರುವ ಪದ್ಧತಿ ಈ ರೀತಿ ಇತ್ತು. "ಓ ದೇವರೆ ಮಗಳನ್ನು ಬೇರಾರಿಗಾದರೂ ನಮಗೆ ಮಾತ್ರ ಮಗನೇ ಇರಲಿ"[೫] ಎಂಬ ಪ್ರಾರ್ಥನೆ  ಪ್ರಾರ್ಥನೆ ಪ್ರಧಾನವಾಗಿತ್ತು ಇದನ್ನು ಹಿನ್ನಲೆಯಾಗಿಟ್ಟುಕೊಂಡು ಸಾಹಿತ್ಯವನ್ನು ಹಲವಾರು ಮಂದಿ ರಚಿಸಿದರು.

ಮಧ್ಯಮ ವರ್ಗದ ಮಹಿಳೆಯರಿಗೆ ಸಾಂಸಾರಿಕ ಜೀವನದಲ್ಲಿ ಗಟ್ಟಿಧ್ವನಿಯನ್ನು ತುಂಬಿಸಿದವರು ಅನುಪಮಾ ನಿರಂಜನರವರು. ಪೌರಾಣಿಕ ಪಾತ್ರಗಳನ್ನು ಸ್ತ್ರೀ ಸಂವೇದನೆಯ ದೃಷ್ಟಿಯಲ್ಲಿ ಕಂಡವರು. ಇವರ ಎಲ್ಲಾ ಪ್ರಕಾರದ ಕಾದಂಬರಿಗಳು ಶೋಷಣೆಗೆ, ದಮನಕ್ಕೆ ಒಳಗಾದ ಸ್ತ್ರೀಯ ಧ್ವನಿಯನ್ನು ಎತ್ತಿ ಹಿಡಿಯುತ್ತವೆ.

ತಮ್ಮ ಲವಲವಿಕೆಯ ಶೈಲಿಯಲ್ಲಿ ಉತ್ತಮ ಸಂಭಾಷಣಾ ಕ್ರಮದಲ್ಲಿ ಜನರ ಮೆಚ್ಚುಗೆ ಗಳಿಸಿರುವುದು ಉಷಾನವರತ್ನರಾವ್. ಇವರ ಕಾದಂಬರಿಗಳು ಬದುಕನ್ನು ಮೇಲು ಮೇಲಿಂದ ನೋಡಿ ಮುಂದೆ ಸಾಗುವ, ಸಮಸ್ಯೆಗಳು ಉದ್ಭವಿಸಿ ಬಹುಬೇಗ ಪರಿಹಾರ ಸೂತ್ರವನ್ನು ಹುಡುಕುವ ಕ್ರಮ ವಿಶಿಷ್ಟವಾಗಿದೆ. ಪ್ರೇಮ ವಿವಾಹ ಸಂಬಂಧಗಳಿಗೆ ಸಿಲುಕುವುದು, ಅಣ್ಣ-ತಮ್ಮಂದಿರಿಬ್ಬರನ್ನೂ ಒಂದೇ ಹುಡುಗಿ ಪ್ರೀತಿಸುವುದು, ಇಲ್ಲವೇ ಪುರುಷನ ನೆರಳಿನಲ್ಲೆ ಬಾಳ್ವೆ ಮಾಡುವ ಸ್ತ್ರೀ ಸಂವೇದನೆಗಳುಳ್ಳ ವಿಶಿಷ್ಟ ತಿರುಳು ಇವರ ಕಾದಂಬರಿಗಳಾಗಿವೆ.

ಎಂ.ಕೆ.ಇಂದಿರಾ ಅವರ ಉತ್ತರಾಧಿಕಾರಿಯೇನೋ ಎನ್ನುವ ರೀತಿಯಲ್ಲಿ ಸಾಹಿತ್ಯವನ್ನು ರಚಿಸಿದ ಮತ್ತೊಬ್ಬ ಲೇಖಕಿ ವೈದೇಹಿಯವರು. ಎಲ್ಲಾ ಪ್ರಕಾರಗಳಲ್ಲಿ ಸಾಹಿತ್ಯವನ್ನು ರಚಿಸಿದ್ದ ಇವರು ಎಲ್ಲಾ ಜನಸಾಮಾನ್ಯರಿಗೂ ತಮ್ಮ ಸಾಹಿತ್ಯ ಅರ್ಥವಾಗುವ ರೀತಿಯಲ್ಲಿ  ಬರೆದಿದ್ದಾರೆ. ಪ್ರಾದೇಶಿಕ ಭಾಷೆಯ ಸೊಗಡಿನಲ್ಲಿ 'ಅಸ್ಪೃಶ್ಯರು' 'ಅಡಿಗೆ ಮನೆ ಹುಡುಗಿ' ಕಾದಂಬರಿಯಂತಹ ಇನ್ನಿತರ ಸಮೃದ್ಧ ಸಾಹಿತ್ಯ ಸೃಷ್ಟಿಯನ್ನು ಮಾಡಿದ್ದಾರೆ.

---

೫. ವಿಹಯಾ ದಬ್ಬೆ- ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆಯ ಸ್ವರೂಪ. ಪುಟ ಸಂಖ್ಯೆ-೧೪ :

ಮಹಿಳೆಯರ ಕೆಲವು ಸಾಮಾಜಿಕ ಸಮಸ್ಯೆಗಳನ್ನು ಕನ್ನಡ ಸಾಹಿತ್ಯದಲ್ಲಿ ಶಕ್ತಿಯುತವಾಗಿ ಬಿಂಬಿಸಿದವರು ಎಂ.ಕೆ. ಇಂದಿರಾ. ದೇವದಾಸಿ ಪದ್ಧತಿಯನ್ನಿಟ್ಟುಕೊಂಡು ಇವರು ರಚಿಸಿದ್ದು ಗೆಜ್ಜೆಪೂಜೆ. ಇದರ ಕಥಾ ನಾಯಕಿ ಚಂದ್ರಿಯ ಮನೆತನವೇ ದೇವದಾಸಿಯರ ಮನೆತನ. ಆದರೆ ವಿದ್ಯಾವಂತೆಯಾದ ಚಂದ್ರಿ ಕುಲಕಸುಬನ್ನು ಮುಂದುವರೆಸಲು ನಿರಾಕರಿಸಿ ವೈವಾಹಿಕ ಬದುಕಿನ ಕನಸು ಕಾಣುತ್ತಾಳೆ.[೬] ಇವಳ ತೊಳಲಾಟವನ್ನು, ಹಂಬಲವನ್ನು ಹೆಣ್ಣಿನ ತುಮುಲಗಳನ್ನು ಚಿತ್ರಿಸಿದ್ದಾರೆ.

ಇವರೆಲ್ಲರಿಗಿಂತಲೂ ಮತ್ತೊಂದು ವರ್ಗ ಸ್ವಲ್ಪ ಭಿನ್ನ ದಾರಿಯಲ್ಲಿ ನಡೆಯಿತು. ಸಮಾಜದಲ್ಲಿ ಮಹಿಳಾ ಸ್ವಾತಂತ್ರ್ಯಕ್ಕೆ ಕಾಲ ಇನ್ನೂ ಪಕ್ವತೆಯನ್ನು ಪಡೆದುಕೊಂಡಿಲ್ಲ ಎನ್ನುವ ಧೋರಣೆ ಹೊಂದಿರುವ ಶಾಂತಾರವರು, ಅಲ್ಪ ಸಂಖ್ಯಾತರು ಹಾಗು ದಲಿತ ವರ್ಗದ ಸಂವೇದನೆಗಳನ್ನು ಮುಕ್ತವಾಗಿ ಹರಿಯಬಿಟ್ಟಿರುವ ಬಿ.ಟಿ.ಲಲಿತಾನಾಯಕ್, ಸಾರಾ ಅಬೂಬಕರ್, ನಾಗವೇಣಿಯಂತಹ ಲೇಖಕಿಯರು ಬಂಡಾಯದ ಧ್ವನಿಯ ಮೂಲಕ ಹೆಣ್ಣಿನ ಚಿತ್ರಣ ಮಾಡಿದ್ದಾರೆ. ಸಮಾಜದಲ್ಲಿ ಸ್ತ್ರೀಯರಿಗೆ ಇರುವ ಸ್ಥಾನಮಾನ ಅವಳನ್ನು ನಡೆಸಿಕೊಳ್ಳುವ ರೀತಿ, ಮೂಲೆಗುಂಪು ಮಾಡಿ ಪೌರುಷ ತೋರುವ ಗಂಡಿನ ದರ್ಪ, ಈ ಶೋಷಣೆಗಳಿಗೆ ಒಳಗಾಗುವ ಹೆಣ್ಣಿನ ನಾನಾ ಸ್ತರಗಳನ್ನು ಚಿತ್ರಿಸಿದ್ದಾರೆ.

ಮುಸ್ಲಿಂ ಸಮಾಜದಲ್ಲಿ ಹೆಣ್ಣಿನ ಸ್ಥಾನಮಾನ ಆ ಕೋಮಿನ ಗಂಡಸರು ಸ್ತ್ರೀಯರ ಬಗೆಗೆ ಹೊಂದಿರುವ ವಿವಿಧ ಮುಖಗಳನ್ನು ಮನಕಲುಕುವಂತೆ ಸಾರಾ ಅಬೂಬಕರ್ ಪರಿಚಯಿಸಿದ್ದಾರೆ. ಅವರ 'ಚಂದ್ರಗಿರಿಯ ತೀರದಲ್ಲಿ' ಎಂಬ ಕಾದಂಬರಿಯು ಮುಖ್ಯವಾಗಿ ತಲಾಖ್ (ವಿವಾಹ ವಿಚ್ಛೇದನ)ನ ಬಗ್ಗೆ ಹೆಚ್ಚು ಬೆಳಕನ್ನು ಬೀರುತ್ತದೆ. ಶಾಸ್ತ್ರ ಮತ್ತು ಧರ್ಮಗಳು ಎಂದಿಗೂ ಪ್ರಶ್ನಾರ್ಹವಲ್ಲ ಎಂಬ ಮಹಾಭಾರತದಲ್ಲಿನ ಅರ್ಜುನನ ಮಾತಿನಂತೆ ಅರಳಿ ಸಂತೋಷದಿಂದ ಇರಬೇಕಾದ ಪ್ರೀತಿಯ ಜೀವಗಳನ್ನು, ಬಾಡಿಸಿ ಧರ್ಮದ ನಿಯಮಗಳು ಮಸುಕಾಗಿಸುತ್ತವೆ. ಇಂತಹ ಧರ್ಮಗಳನ್ನು ಪ್ರಶ್ನಿಸುವ ಗೋಜಿಗೆ ಹೋಗದೆ 'ನಾದಿರಾ' ಭೂಮಿಯ ಋಣವನ್ನು ಕಳೆದುಕೊಳ್ಳುವ ಹೆಣ್ಣಿನ ವೇದನೆಯು ಮನೋಜ್ಞವಾಗಿ ಚಿತ್ರಿತವಾಗಿದೆ.

ಈ ಹಿನ್ನಲೆಯಲ್ಲಿ ಗಂಡು ಭಾಷೆಯೆಂದೇ ಪರಿಚಿತವಾಗಿರುವ ಉತ್ತರ ಕರ್ನಾಟಕದ ಭಾಷೆಯಲ್ಲಿ ಬರೆದು ಎಲ್ಲರ ಮೆಚ್ಚುಗೆ ಗಳಿಸಿರುವ ಲೇಖಕಿ ಗೀತಾ ನಾಗಭೂಷಣ್ ತನ್ನ ಗ್ರಾಮೀಣ ಗಡುಸು ಭಾಷೆಯಲ್ಲೆ ದಲಿತ ಕೇರಿಯ ಹೆಣ್ಣು ಮಕ್ಕಳ ಮೇಲಾಗುತ್ತಿರುವ ಧಾರ್ಮಿಕ ಮತ್ತು ಸಾಮಾಜಿಕ ಶೋಷಣೆಗಳನ್ನು ತಮ್ಮ ಕಾದಂಬರಿಗಳಲ್ಲಿ ವಿವರಿಸಿದ್ದಾರೆ.

---

೬. ಪುಟಸಂಖ್ಯೆ-೮೦ : ಸಾರಾ ಅಬೂಬಕ್ಕರ-ಸಾಹಿತ್ಯ ಸಂಸ್ಕೃತ ಮತ್ತು ಮಹಿಳೆ. ಕನ್ನಡ ವಿಶ್ವವಿದ್ಯಾಲಯ-೨೦೦೭

ಸಾಮಾಜಿಕ ಶೋಷಣೆಗಳನ್ನು ತಮ್ಮ ಕಾದಂಬರಿಗಳಲ್ಲಿ ವಿವರಿಸಿದ್ದಾರೆ. ಅವರ 'ದಂಗೆ' 'ಹಸಿಮಾಂಸ ಮತ್ತು ಹದ್ದುಗಳು' ಹಳ್ಳಿಯ ಮುಗ್ಧ ಜನರ ಮೌಢ್ಯತೆಯನ್ನು ಬಂಡವಾಳವಾಗಿಸಿ ಹೆಣ್ಣನ್ನು ಬಳಸಿಕೊಳ್ಳುವ ರೀತಿಯನ್ನು ಯಾವ ರಿವಾಜು ಇಲ್ಲದೆ ತಮ್ಮ ಕಾದಂಬರಿಗಳಲ್ಲಿ ತಂದಿದ್ದಾರೆ.

ಈ ರೀತಿಯಾಗಿ ಹೆಣ್ಣು ಎಂದರೆ ಮನೆಯ ಪಾತ್ರೆ ತೊಳೆಯುವವಳು, ತೊಟ್ಟಿಲು ತೂಗಲಷ್ಟೆ ಯೋಗ್ಯಳು ಎಂದು ಮೂಲೆಗುಂಪು ಮಾಡಿರುವ ಸಂದರ್ಭದಲ್ಲಿ ಸಾಹಿತ್ಯ ರಚನೆಯಲ್ಲಿ ಸ್ತ್ರೀಯರು ತಮ್ಮನ್ನು ಸಕ್ರಿಯರಾಗಿ ತೊಡಗಿಸಿಕೊಂಡು ಪ್ರಗತಿಪರ ನೆಲೆಯಲ್ಲಿ ಆಲೋಚನೆ ಮಾಡುತ್ತಿರುವುದು ನಿಜಕ್ಕೂ ಒಂದು ಆರೋಗ್ಯಕರ ಸಮಾಜ ನಿರ್ಮಾಣವಾಗುವ ದಿನಗಳನ್ನು ಎದುರು ನೋಡಲು ಸಾಧ್ಯವಾಗಬಹುದು. ತಮ್ಮ ನೋವು ನಲಿವುಗಳನ್ನು ಹಂಚಿಕೊಳ್ಳಲಾಗದ ಸಂದರ್ಭದಲ್ಲಿ ಬರವಣಿಗೆ ಮೂಲಕ ತಮ್ಮ ದುಃಖವನ್ನು ತೊಡಿಕೊಂಡರು. ಮಹಿಳಾ ಸಾಹಿತ್ಯ ಎಂದರೆ ಅಡಿಗೆ ಮನೆ ಸಾಹಿತ್ಯವಾಗದೇ ಅದರಾಚಿನದೂ ಆಗಿದೆ ಎನ್ನುವುದು ಇವರ ಸಾಹಿತ್ಯ ಸ್ಪಷ್ಟಪಡಿಸುತ್ತದೆ. ಹೆಣ್ಣಿನ ಶೋಷಣೆಯ ಮೇಲ್ಪದರವನ್ನು, ಆಂತರಿಕ ನೆಲೆಯನ್ನು ವಿವಿಧ ಮಜಲುಗಳಾಗಿ ಚಿತ್ರಣ ಮಾಡಿದ್ದಾರೆ. ಬೇರೊಬ್ಬರ ಅನುಭವಕ್ಕೆ ಸರಿಯಾಗಿ ದಕ್ಕದ, ಸ್ತ್ರೀಯರು ಮಾತ್ರವೇ ಅನುಭವಿಸಿದ ವಿಚಿತ್ರ ಅನುಭವಗಳನ್ನು ಇಲ್ಲಿ ಕಟ್ಟಿಕೊಟ್ಟಿದ್ದಾರೆ.

# ಅಧ್ಯಾಯ –೪

## ಗೀತಾ ನಾಗಭೂಷಣ್–ಬದುಕು ಮತ್ತು ಬರಹ

"ಹೆಣ್ಣು ಸಂಸಾರದ ಕಣ್ಣು" ಎಂಬ ಉಕ್ತಿಯಂತೆ, ಕನ್ನಡ ನಾಡಿನ ಅಬಲೆಯರು, ಶೋಷಿತ ಹೆಣ್ಣು ಮಕ್ಕಳ, ಬಾಳಿನ ವಾಸ್ತವ ಚಿತ್ರಣವನ್ನು ಸಮಾಜದ ಮುಂದೆ ತೆರೆದಿರಿಸಿದವರು ಗೀತಾನಾಗಭೂಷಣ್‌ರವರು.

ಕನ್ನಡ ಮಹಿಳಾ ಸಾಹಿತ್ಯದ ಮುಕುಟಕ್ಕೆ ಪ್ರಪ್ರಥಮ ಬಾರಿಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿಯ ಗರಿಯನ್ನು ಮೂಡಿಸಿದವರು ಹಾಗು ಕರ್ನಾಟಕ ಸಾಹಿತ್ಯ ಅಕಾಡೆಮಿಯ ಪ್ರಥಮ ಮಹಿಳಾ ಅಧ್ಯಕ್ಷರೆಂಬ ಹಿರಿಮೆಗೆ ಪಾತ್ರರಾದವರು ಶ್ರೀಮತಿ ಗೀತಾನಾಗಭೂಷಣ್‌ರವರು.

ಉತ್ತರ ಕರ್ನಾಟಕದ ಗ್ರಾಮೀಣ ಭಾಷೆಯ ಪ್ರಾದೇಶಿಕ ಸೊಗಡಿನಲ್ಲಿ ಸಾಹಿತ್ಯ ಕೃಷಿಯಲ್ಲಿ ತೊಡಗಿಸಿಕೊಂಡಿರುವ ಕನ್ನಡಿಗರ ಮನೆ ಮಾತಾಗಿರುವ ಗೀತಾನಾಗಭೂಷಣ್ ಕನ್ನಡದ ಮಹತ್ವದ ಲೇಖಕರು. ಅವರ ಬಾಲ್ಯದ ಬದುಕನ್ನು ಗ್ರಹಿಸಿದರೆ ಅವರು ಸಮಾಜದಲ್ಲಿ ಎದುರಿಸಿದಂತಹ ದೌರ್ಜನ್ಯ, ಲಿಂಗ ತಾರತಮ್ಯ, ಜಾತಿವೈಷಮ್ಯಗಳು ಮೇರೆ ಮೀರಿದ್ದಾಗಿವೆ. ತಮ್ಮ ಜೀವನದಲ್ಲಿ ಹಲವಾರು ಕಷ್ಟಗಳನ್ನು ಎದುರಿಸಿ ಬಂದಂತಹ ಗೀತಾನಾಗಭೂಷಣ್ ಗುಲ್ಬರ್ಗಾ ಜಿಲ್ಲೆಯ ಸಾವಳಗಿಯಲ್ಲಿ ಶಾಂತಪ್ಪ ಮತ್ತು ಶರಣಮ್ಮನವರ ಮಗಳಾಗಿ ೨೫ನೇ ಮಾರ್ಚ್ ೧೯೪೨ರಲ್ಲಿ ಜನಿಸಿದರು.

ಗೀತಾನಾಗಭೂಷಣ್‌ರವರ ತಂದೆ ಶಾಂತಪ್ಪನವರು ಗುಲ್ಬರ್ಗಾದ ಬಟ್ಟೆ ಗಿರಣಿ ಅಂಗಡಿಯೊಂದರಲ್ಲಿ ಕಾರ್ಮಿಕರಾಗಿ ತಿಂಗಳಿಗೆ ಐವತ್ತು ರೂಪಾಯಿಯನ್ನು ಸಂಪಾದಿಸುತ್ತಿದ್ದರು. ಮೂರು ಹೆಣ್ಣು ಮಕ್ಕಳು ಹಾಗು ಒಬ್ಬ ಗಂಡುಮಗ ಹಾಗು ಗಂಡ ಹೆಂಡತಿ ಸೇರಿ ಆರು ಜನರಿದ್ದ ಈ ಕುಟುಂಬದ ಊಟಕ್ಕೆ ಸಾಲುತ್ತಿರಲಿಲ್ಲ. ತಾಯಿ ಶರಣಮ್ಮನವರು ಮನೆಯಲ್ಲಿ ಒಂದು ಎಮ್ಮೆಯನ್ನು ಸಾಕಿಕೊಂಡು ಅದರಿಂದ ಬರುವ ಹಾಲನ್ನು ಮಾರಿ ಒಂದಷ್ಟು ಚಿಲ್ಲರೆಯನ್ನು ಸಂಪಾದಿಸಿ ಸಂಸಾರವನ್ನು ನಿಭಾಯಿಸುತ್ತಿದ್ದ ಸಂಸಾರಸ್ಥೆ (ಗೃಹಿಣಿ) ಆಕೆ.

ಅನಕ್ಷರಸ್ಥರಾಗಿ, ತಳವಾರ ಜಾತಿಯಲ್ಲಿ ಇದ್ದ ಶಾಂತಪ್ಪರು ಮಗಳನ್ನು ತಾಲುಕುದಾರಳನ್ನಾಗಿಯೋ, ತಹಸೀಲ್ದಾರಳನ್ನಾಗಿಯೋ ಮಾಡಬೇಕೆಂಬ ದೊಡ್ಡ ಬಯಕೆಯನ್ನು ಹೊಂದಿದ್ದರು. ದೇಶಪ್ರೇಮಿಯು, ಸ್ವಾತಂತ್ರ್ಯ ಹೋರಾಟಗಾರರು ಆಗಿದ್ದ ಶಾಂತಪ್ಪ ಸೆರೆಮನೆ ವಾಸವನ್ನು ಅನುಭವಿಸಿದ್ದರು. ಗೀತಾನಾಗಭೂಷಣ್‌ರು ತಾಯಿಯ ಗರ್ಭದಲ್ಲಿದ್ದಾಗ ತಂದೆ ಜೈಲಿನಲ್ಲಿ ಸ್ವಾತಂತ್ರ್ಯ ಚಳುವಳಿಗಾರರು ಹೇಳುತ್ತಿದ್ದ ಝಾನ್ಸಿರಾಣಿ ಲಕ್ಷ್ಮಿಭಾಯಿ, ಭಗತ್‌ಸಿಂಗ್, ಸುಭಾಷ್‌ಚಂದ್ರಬೋಸ್ ಮೊದಲಾದ ಸ್ವಾತಂತ್ರ್ಯ

ಹೋರಾಟಗಾರರ ಕಥೆಗಳನ್ನು ಕೇಳಿಸಿಕೊಂಡು ಮತ್ತಷ್ಟು ಪ್ರೇರಿತರಾಗಿದ್ದರು. ಜೈಲಿನಿಂದ ಮರಳಿದ ತಂದೆ ತಮ್ಮ ಮಗಳಿಗೆ ಸ್ವಾತಂತ್ರ್ಯ ಹೋರಾಟಗಾರರ ಕಥೆಗಳನ್ನು ಮನಮಿಡಿಯುವಂತೆ ಹೇಳಿ ಮಗಳಲ್ಲೂ ಅದೇ ಕಿಚ್ಚನ್ನು ಮೂಡಿಸಿದ್ದರು. ಕೆಳವರ್ಗದಲ್ಲಿ ಯಾರು ಶಾಲೆಗೆ ಹೋಗಿ ವಿದ್ಯಾಭ್ಯಾಸ ಮಾಡುತ್ತಿರಲಿಲ್ಲ ಆದರೆ ತಮ್ಮ ಮಗಳನ್ನು ಎತ್ತರದ ಸ್ಥಾನದಲ್ಲಿ ನಿಲ್ಲಿಸಲು ಆಸೆಪಟ್ಟಿದ್ದ ತಂದೆ ಮಗಳನ್ನು ಶಾಲೆಗೆ ಕಳುಹಿಸುತ್ತಿದ್ದರು. ವೀರ ವನಿತೆಯರ ಕಥೆಗಳನ್ನು ಹೇಳುತ್ತಾ "ಹೋಯಿಂದು ಮಗಾ.... ಅವರಂಗ ಆಗ್ಬೇಕಾದ್ರ ಮದಲ ನೀ ವಿದ್ಯಾವಂತಿ ಆಗ್ಬೇಕು. ಬಾಳೋಟು ಸಾಲಿ ಕಲ್ತು, ಬಿ.ಎ., ಎಂ.ಎ., ಪಾಸು ಮಾಡ್ಬೇಕವ್ವಾ"[೧] ಎನ್ನುತ್ತಿದ್ದರು. ಅಪ್ಪನ ಆಸೆಯಂತೆಯೇ ವಿದ್ಯಾಭ್ಯಾಸ ಮಾಡುತ್ತಿದ್ದವಳಿಗೆ ಸಮಾಜದಲ್ಲಿ ನಿಂದನೆಗೆ ಒಳಗಾಗಬೇಕಾಯಿತು. ಮೇಲ್ವರ್ಗದವರ ಓಣಿಯಲ್ಲಿ ಇದ್ದ ಇವರು ಅವರ ಮಕ್ಕಳ ಸರಿಸಮಾನವಾಗಿ ವಿದ್ಯಾಭ್ಯಾಸ ಪಡೆಯುವ ಗೀತಾರನ್ನು ಕಂಡರೆ ಆಗುತ್ತಿರಲಿಲ್ಲ. ಗೆಳತಿಯರು ಓದಿ ಮುಗಿಸಿರುವ ಹಳೆಯ ಪುಸ್ತಕಗಳನ್ನೇ ಓದುತ್ತಾ, ದೀಪದ ಬೆಳಕಿಗೂ ಬಡತನವಿದ್ದ ಮನೆಯಾದ್ದರಿಂದ ಬ್ರಾಹ್ಮಣರ ಮನೆಯ ಹುಡುಗರು ಓದಿಕೊಳ್ಳುವಾಗ ಅವರ ಮನೆಗೆ ಹೋಗಿ ತುಸು ದೂರದಲ್ಲಿ ಕುಳಿತು ಓದಿಕೊಳ್ಳುತ್ತಿದ್ದರು. ಈ ರೀತಿ ಕ್ರೂರ ಬಡತನ ಬವಣೆಯಲ್ಲೂ ಕಷ್ಟಪಟ್ಟು ಓದಿದ್ದು ನಿಜಕ್ಕೂ ಮೆಚ್ಚಬೇಕಾದ ಸಂಗತಿಯಾಗುಯತ್ತದೆ.

ಶಾಂತಪ್ಪ ಬಟ್ಟೆ ಗಿರಣಿಯ ನೌಕರನಾಗಿದ್ದು ಬರುತ್ತಿದ್ದ ಅಲ್ಪ ಸಂಬಳದಲ್ಲಿ ತನ್ನ ಇಬ್ಬರು ಹೆಣ್ಣು ಮಕ್ಕಳನ್ನು ಹಾಗು ಒಬ್ಬ ಮಗನನ್ನು ಓದಿಸುತ್ತಿದ್ದರು. ಶಾಂತಪ್ಪನವರು ಕಾಯಿಲೆಯಾಗಿ ಸಾವನ್ನಪ್ಪಿದಾಗ ತಾಯಿ ಶರಣವ್ವ ತರಕಾರಿಯನ್ನು ಮಾರಿ ಮಕ್ಕಳನ್ನು ಶಾಲೆಗೆ ಕಳುಹಿಸುತ್ತಿದ್ದುದ್ದನ್ನು ಇಲ್ಲಿ ಸ್ಮರಿಸಬಹುದು.

ಗೀತಾನಾಗಭೂಷಣ್ ಮೆಟ್ರಿಕ್ ಪಾಸಾದ ನಂತರ ವಿದ್ಯಾಭ್ಯಾಸದ ಜೊತೆಗೆ ಕೆಲಸಕ್ಕೂ ಕೂಡ ಸೇರಿದರು. ಕಲೆಕ್ಟರ್ ಆಫೀಸಿನಲ್ಲಿ ಗುಮಾಸ್ತೆಯಾಗಿ ಕೆಲಸಕ್ಕೆ ಸೇರಿದಾಗ ಆ ಜಿಲ್ಲೆಗೆ ಮೊಟ್ಟಮೊದಲ ಏಕೈಕ ಮಹಿಳಾ ಗುಮಾಸ್ತೆ ಎಂಬ ಹೆಗ್ಗಳಿಕೆಗೆ ಇವರು ಪಾತ್ರರಾಗಿದ್ದರು. ಏಳು ಗಂಟೆಗೆ ಮನೆ ಬಿಟ್ಟು ಶ್ರೀ ಶರಣ ಬಸವೇಶ್ವರ ಕಲಾ ಮಹಾವಿದ್ಯಾಲಯಕ್ಕೆ ಬಂದು ಮೂರು ತರಗತಿಗಳಿಗೆ ಹಾಜರಾಗಿ ಉಳಿದ ತರಗತಿಗಳಿಗೆ ಗೈರು ಹಾಜರಾಗಿ ಹಳ್ಳ, ಗುಡ್ಡ, ರಸ್ತೆಗಳನ್ನು ದಾಟಿಕೊಂಡು ಓಡುತ್ತಾ ಕೆಲಸಕ್ಕೆ ಬರುತ್ತಿದ್ದರು. ಕೆಲಸ ಹಾಗು ವಿದ್ಯಾಭ್ಯಾಸ ಎರಡನ್ನು ತೂಗಿಸಿಕೊಂಡು ಸ್ನಾತಕೋತ್ತರ ಹಾಗು ಬಿ.ಇಡಿ. ಪದವಿಗಳನ್ನು ಪಡೆದದ್ದು ಗಮನಾರ್ಹವಾದ ಸಂಗತಿ.

ಶಿಕ್ಷಕಿಯಾಗಿ ವೃತ್ತಿ ಜೀವನವನ್ನು ಆರಂಭಿಸಿದ ಗೀತಾರವರು ಮೂವತ್ತು ವರ್ಷಗಳ ಕಾಲ ಕಾಲೇಜಿನ ಪ್ರಾಂಶುಪಾಲರಾಗಿ ಸೇವೆಯನ್ನು ಸಲ್ಲಿಸಿ ನಿವೃತ್ತಿಯನ್ನು ಪಡೆದರು. ತಮ್ಮ ಬಾಲ್ಯದ ದಿನಗಳಲ್ಲಿ ಅನುಭವಿಸಿದ ತೀವ್ರವಾದ ಬಡತನದ ಬವಣೆ ಹಾಗು ಮೇಲ್ವರ್ಗದ

---

೧. ಎಲ್.ವಿ. ಶಾಂತಕುಮಾರಿ: ಗೀತಾನಾಗಭೂಷಣ್. ಪುಟ–೫:ಸ್ವಪ್ನ ಬುಕ್ ಹೌಸ್–೨೦೧

ಜನರ ತಾರತಮ್ಯ ನೀತಿಗಳು, ಪಕ್ಕದ ಮನೆಯಲ್ಲಿ ಅಭ್ಯಾಸ ಮಾಡಲು ಹೋದಾಗ ಅನುಭವಿಸಿದ ಅವಮಾನ-ಕೀಳರಿಮೆಗಳು ಮನಸ್ಸಿನಲ್ಲಿ ಬಂಡಾಯ, ಪ್ರತಿಭಟನೆಗಳು ಒಳಗೊಳಗೆ ಜ್ವಾಲಮುಖಿಯಂತೆ ಕುದಿಯುತ್ತಿದ್ದವು. ಈ ಜ್ವಾಲ-ಮುಖಿ ಹೊರಗೆ ಉಕ್ಕುವ ಸಮಯವನ್ನು ನಿರೀಕ್ಷಿಸುತ್ತಿದ್ದವು. ತಮ್ಮ ನೋವುಗಳನ್ನು ತಿರಸ್ಕಾರಗಳನ್ನು ಸಾಹಿತ್ಯಕವಾಗಿ ಮಾರ್ಪಡಿಸಿ ನಂತರ ಬರೆಯಲು ಪ್ರಾರಂಭ ಮಾಡಿದರು.

ತಮ್ಮ ಬರಹವನ್ನು ಪ್ರಾರಂಭಿಸಿದ ಬಗ್ಗೆ ಈ ರೀತಿ ಹೇಳುತ್ತಾರೆ "ಹೌದು... ನಾನೇಕೆ ಬರೆಯಲು ಶುರುಮಾಡಿದೆ? ಅನ್ನುವ ಪ್ರಶ್ನೆ ಆಗಾಗ ನನ್ನನ್ನು ಕಾಡಿದ್ದಿದೆ. ಬಾಲ್ಯದಲ್ಲಿ ನಾನು ಅನುಭವಿಸಿದ ಉತ್ತಮರ ತಿರಸ್ಕಾರ ಅಪಮಾನಗಳ ಸೇಡು ಈಗ ಈ ನನ್ನ ಬರಹದ ಮೂಲಕ ತೀರಿಸಿಕೊಳ್ಳುತ್ತಿದ್ದೇನೆಯೆ? ಎಂಬ ಗುಮಾನಿಯೂ ಇದೆ. ಹೌದು ಆ ಹಾರುವರ ಹೆಂಗಸರು ನನ್ನನ್ನು ಅವಮಾನಿಸಿದ ಪ್ರಸಂಗಗಳೆಷ್ಟು? ನನ್ನ ಎಳೆ ಮನಸ್ಸನ್ನ ಘಾಸಿಗೊಳಿಸಿದ ಬಗೆಗಳೆಷ್ಟು?"[೨] ಎಂದು ಹೇಳಿಕೊಂಡಿದ್ದಾರೆ. ಈ ರೀತಿ ಬಾಲ್ಯದಲ್ಲಿ ಅನುಭವಿಸಿದ ನೋವುಗಳ ಜೊತೆಗೆ ಮುಂದಿನ ಜೀವನ ಸುಗಮವಾಗಿರುತ್ತದೆ ಎಂದು ಕನಸುಗಳನ್ನು ಕಂಡ ಇವರಿಗೆ ದಾಂಪತ್ಯ ಜೀವನವು ಬಿಸಿಲುಗುದುರೆಯಾಗಿ ಪರಿಣಮಿಸಿತು.

ಮದುವೆಯ ಜೀವನ ಸುಖ ಸಂತೋಷಗಳನ್ನು ತರುವುದರ ಬದಲಿಗೆ ನೋವು, ಹತಾಶೆ, ಸಂಕಟ, ದು:ಖ ದುಮ್ಮಾನಗಳನ್ನು ಇಮ್ಮಡಿಗೊಳಿಸಿತು. ಗಂಡ ಹೆಂಡತಿ ನಡುವೆ ಅನ್ಯೂನ್ಯತೆ, ಹೊಂದಾಣಿಕೆ ಇಲ್ಲದ್ದರ ಪರಿಣಾಮವಾಗಿ ಮೊದಲಿನ ಮದುವೆ ಮುರಿದು ಬಿದ್ದಿತು. ತದನಂತರ ಮನೆಯವರ, ಬಂಧುಗಳ ಸಮಾಜದ ವಿರೋಧವನ್ನು ಕಟ್ಟಿಕೊಂಡು ಎರಡನೇ ಮದುವೆಯಾಗಿ ಹೆಂಡತಿ ಮಕ್ಕಳಿದ್ದ ನಾಗಭೂಷಣನನ್ನು ವಿವಾಹವಾದರು. ಮೊದಮೊದಲು ಎಲ್ಲವು ಚೆನ್ನಾಗಿ ಇತ್ತು. ದಿನಗಳು ಕಳೆದ ಹಾಗೆ ಗಂಡನ ನಿಜ ಸ್ವರೂಪ ಬಯಲಾಗುತ್ತಾ ಬಂದಿತು. ಮಿತಿ ಮೀರಿ ಕುಡಿಯುವುದು, ಹೆಂಡತಿ ಮಕ್ಕಳನ್ನು ಹೊಡೆಯುವುದು, ಮನೆಯ ಜವಬ್ದಾರಿಯನ್ನು ಹೊರದೆ ಹೆಂಡತಿಯ ಸಂಬಳದಲ್ಲಿ ತನ್ನ ಖರ್ಚನ್ನು ಮಾಡುವ ನಾಗಭೂಷಣ್‌ನ ಜೊತೆ ಬಾಳ್ವೆ ಅಸಾಧ್ಯ ಎನಿಸುತಿತ್ತು. ನಾಗಭೂಷಣ್ ಮನೆಯ ಅಮೂಲ್ಯ ವಸ್ತುಗಳನ್ನು ಖಾಲಿ ಮಾಡಿದ ಮೇಲೆ ಆ ಮನೆಯನ್ನು ಖಾಲಿ ಮಾಡಿ ಮೊದಲ ಹೆಂಡತಿ ಮನೆಯನ್ನು ಸೇರಿಕೊಳ್ಳುವುದನ್ನು ಕಾಣಬಹುದು. ಮೂರು ಮಕ್ಕಳನ್ನು ಸಾಕುವ ಜವಬ್ದಾರಿ, ಸಮಾಜದ ಅಪಮಾನ, ಒಂಟಿತನಗಳನ್ನು ಎದುರಿಸುವ ಹೊಣೆಗಾರಿಕೆ ಹೊತ್ತು, ಗಂಡನ ಗುಲಾಮಳಾಗುವ ಬದಲು ನಿರ್ಗತಿಕಳಾಗಿ ಬಾಳುತ್ತೇನೆ ಎಂದು ಹಠ ತೊಟ್ಟು ಬಾಳ್ವೆ ನಡೆಸಲು ತಯಾರಾದರು. ಬರೆಯುವ ತುಡಿತ ಹೆಚ್ಚಾಗಿ ಬರವಣಿಗೆಗೆ ಶಕ್ತಿ ಬಂದಿತು.

---

೨. ಸಂಪಾದಕರು, ಉಷಾ.ಪಿ.ರೈ, ಕೆ.ಎಂ. ವಿಜಯಲಕ್ಷ್ಮಿ-ಲೇಖಲೋಕ-೪ ಮಹಿಳಾ ಸಾಹಿತ್ಯ: ಒಂದು ಆತ್ಮ ಕಥಾನಕ, ಪುಟ ಸಂಖ್ಯೆ-೩೬,೨೦೦೩ ಕರ್ನಾಟಕ ಲೇಖಕಿಯರ ಸಂಘ.

ತಮ್ಮ ಬದುಕಿನಲ್ಲಿ ಬಂದಂತಹ ಕಹಿಕಹಿ ಕೆಟ್ಟ ಅನುಭವಗಳೇ ಬರೆಯುವಂತೆ ಪ್ರೇರೇಪಿಸಿ ಸಾಹಿತ್ಯ ಕೃಷಿಗೆ ಇಳಿದ ಇವರು ಆರಿಸಿಕೊಳ್ಳುವ ವಸ್ತುವಿನ ನಾವಿನ್ಯತೆ ಮತ್ತು ಬಳಸುವ ಭಾಷೆಯಲ್ಲಿಯ ಹೊಸತನದಿಂದಾಗಿ ಇವರು ಬರೆದ ಸಾಹಿತ್ಯಗಳೆಲ್ಲವು ಕನ್ನಡ ಸಾಹಿತ್ಯದಲ್ಲಿ ಗಟ್ಟಿ ನೆಲೆಯನ್ನು ಒದಗಿಸಿಕೊಟ್ಟವು. ಸುಮಾರು ೩೦ ಕಾದಂಬರಿಗಳು, ಸಂಶೋಧನೆ, ಕಥಾಸಂಕಲನಗಳು, ಸಂಪಾದನೆ, ಕಿರುತೆರೆಗಾಗಿ ರಚಿಸಿದ ಕೃತಿಗಳು, ಆಕಾಶವಾಣಿಯಲ್ಲಿ ಪ್ರಸಾರಗೊಂಡ ಐವತ್ತು ಕಥೆಗಳು ಹೀಗೆ ಅನೇಕ ಪ್ರಕಾರಗಳಲ್ಲಿ ತಮ್ಮನ್ನು ತಾವು ದುಡಿಸಿಕೊಂಡಿದ್ದಾರೆ.

"ಮೊದಮೊದಲು ಇವರು ಬರೆದ ಕಥೆ, ಕಾದಂಬರಿಗಳ ಪಾತ್ರಗಳು ಚಂದದ ಚೆಲುವೆಯರು, ಬಹುಮಹಡಿ, ಭವ್ಯಬಂಗಲೆ, ಸ್ಟಾರ್ ಹೋಟೆಲ್, ಇವುಗಳೇ ಕಾದಂಬರಿಯ ಕ್ರಿಯಾ ಕ್ಷೇತ್ರಗಳು, ಇನ್ನು ಅದರ ಹೀರೋಯಿನ್‌ಗಳು, ಅಪ್ರತಿಮ ಸುಂದರಿಯರು, ಅವರ ದುಂಬಿಗಣ್ಣು, ತೊಂಡೆತುಟಿ, ಸೇಬುಗೆನ್ನೆ, ಸಂಪಿಗೆಮೂಗು, ಶಂಖಗೊರಳು, ತಾವರೆ ಮೊಗ್ಗಿನ ಮಾಲೆಗಳು ವರ್ಣನೆಯೇ ವರ್ಣನೆ..."[೩] ಇಂತಹ ಅಂಶಗಳನ್ನು ಇಟ್ಟುಕೊಂಡು ಬರೆದ ಕಾದಂಬರಿಗಳು 'ಏರಿಳಿತಗಳು', 'ಬದಲಾಗುವ ಬಣ್ಣಗಳು', 'ಆಘಾತ', 'ನನ್ನ ನಿನ್ನ ನಡುವೆ', 'ಅಭಿಮಾನ', 'ನಿನ್ನ ತೋಳಿನಲ್ಲಿ', ಇತ್ಯಾದಿ ಕಾದಂಬರಿಗಳು ಇವರ ಜನಪ್ರಿಯತೆಯನ್ನು ಹೆಚ್ಚಿಸಿದವು. ತನ್ನ ಬರವಣಿಗೆ ಬಗ್ಗೆ ತಾನೇ ಯೋಚಿಸಿ ತೃಪ್ತರಾಗದ ಇವರು ತಾನು ಬರೆಯ ಬೇಕಾಗಿರುವುದು ಬೇರೆ ಇದೇ ಅದು ಏನೆಂದು ಅರಿಯುವ ಪ್ರಯತ್ನವನ್ನು ಮಾಡಿದರು.

ತಮ್ಮ ಬರವಣಿಗೆಯ ಶೈಲಿಯನ್ನು ಬದಲಾಯಿಸಿ ಶೋಷಣೆಯ ವಿರುದ್ಧ ಪ್ರತಿಭಟನೆಯ ಧ್ವನಿಯಲ್ಲಿ ಬರೆದರು. ಇದಕ್ಕೆ ಕಾರಣ ತಮ್ಮ ತಾಯಿಯ ತವರೂರು ಚುಂಚೂರಿನ ಮಾಪುರತಾಯಿ ಜಾತ್ರೆಗೆ ಹೋಗಿದ್ದಾಗ ಅಲ್ಲಿ ಕಂಡ ಚಿತ್ರಣ. ದಲಿತ ಹೆಣ್ಣು ಮಕ್ಕಳ ಬೆತ್ತಲ ಸೇವೆ, ಮತ್ತು ಹರೆಯದ ಹೆಣ್ಣುಮಕ್ಕಳನ್ನು ದೇವಿಗೆ 'ಜೋಗಿಣಿ'ಯಾಗಿ ಬಿಡುವ ಪದ್ಧತಿಯನ್ನು ನೋಡಿ ಹೊಸ ರೀತಿಯ ಬರಹಕ್ಕೆ ಪ್ರೇರಣೆಯನ್ನು ಒದಗಿಸಿತು. ಮನರಂಜನೆಯ ಕಾದಂಬರಿಗಳನ್ನು ಬಿಟ್ಟು ಕೊಳಗೇರಿಯ ಝೋಪಡಿಪಟ್ಟಿಯ ಜನರು ಮತ್ತು ಅದರಲ್ಲಿ ಹೆಣ್ಣು ಮಕ್ಕಳ ಜೀವನ, ಅವರ ಸಮಸ್ಯೆಗಳು, ದೇವರ ಮೌಢ್ಯ ಇವುಗಳನ್ನು ತಮ್ಮ ಸಾಹಿತ್ಯ ವಸ್ತುಗಳಾಗಿ ಬಳಸಿ ಬರೆಯಲು ಪ್ರಾರಂಭಿಸಿದರು. 'ಹಸಿಮಾಂಸ ಮತ್ತು ಹದ್ದುಗಳು' 'ಮಾಪುರ ತಾಯಿಯ ಮಕ್ಕಳು', 'ಧುಮ್ಮಸು', 'ದಂಗೆ' 'ಆಸರೆ' 'ನೀಲಗಂಗಾ', 'ಬದುಕು', ಮತ್ತು 'ಕಾಗೆ ಮುಟ್ಟಿತು' ಇವು ಇವರ ಎರಡನೆ ಹಂತದ ಕೃತಿಗಳಾಗಿವೆ.

---

೩. ಎಲ್.ವಿ. ಶಾಂತಕುಮಾರಿ: ಗೀತಾನಾಗಭೂಷಣ್. ಪುಟ--೧೭: ಸ್ವಪ್ನ ಬುಕ್ ಹೌಸ್-೨೦೧

ದಲಿತ ಲೋಕದ ಯಾತನೆಯ ಬದುಕಿನ ಬಗ್ಗೆ, ಬಡತನವನ್ನೇ ಉಂಡುಟ್ಟುವರ ಬಗ್ಗೆ, ಕೆಳಜಾತಿಯ ನಿರ್ಗತಿಕರ ಬಗ್ಗೆ ಬರೆಯಲು ಶರು ಮಾಡಿದ ಇವರು ಎಲ್ಲಾ ಪ್ರಕಾರದ ಸಾಹಿತ್ಯದಲ್ಲೂ ರಚನೆ ಮಾಡಿದ್ದಾರೆ. ಇವರ ಪ್ರಮುಖ ಕಾದಂಬರಿಗಳೆಂದರೆ 'ತಾವರೆಯ ಹೂವು', 'ಹಸಿಮಾಂಸ ಮತ್ತು ಹದ್ದುಗಳು'. 'ಬದಲಾಗುವ ಬಣ್ಣಗಳು' 'ಚಂದನದ ಚಿಗುರು', 'ಮಹಾಮನೆ', 'ಮರಳಿನ ಮನೆ' 'ಆಘಾತ', 'ಧುಮ್ಮಸು', 'ದಂಗೆ', 'ಬದುಕು' 'ಚಿಕ್ಕಿಯ' ಹರೆಯದ ದಿನಗಳು', 'ಬದುಕಲು ಹೋದವರು', 'ಆಸರೆಗಳು', 'ಅವ್ವ' 'ಜ್ವಲಂತ' 'ಅವಾಂತರ' ಕಾದಂಬರಿಗಳು ಖ್ಯಾತಿಯನ್ನು ಪಡೆದಿವೆ. 'ದುರಗ ಮರಗಿಯರ ಸಂಸ್ಕೃತಿ' ಎಂಬುದು ಇವರ ಸಂಶೋಧನಾ ಪ್ರಬಂಧವಾಗಿದೆ. ಸುಮಾರು ೫೦ ಕಥೆಗಳು, ೧೫ ನಾಟಕಗಳು ಆಕಾಶವಾಣಿ ಕೇಂದ್ರದಿಂದ ಪ್ರಸಾರವಾಗಿವೆ. 'ಜೋಗಿಣಿ', 'ಅವ್ವ' 'ಸತ್ತ ಹೆಣ್ಣಿನ ಸುತ್ತ', 'ಜೀವನಚಕ್ರ' 'ನೀಲಗಂಗಾ' ಕೃತಿಗಳು ಕಿರುತೆರೆಯಲ್ಲಿ ಮೂಡಿಬಂದಿವೆ. 'ಹಸಿಮಾಂಸ ಮತ್ತು ಹದ್ದುಗಳು' ಎಂಬ ಕಾದಂಬರಿ 'ಹೆಣ್ಣಿನ ಕೂಗು' ಎಂಬ ಹೆಸರಿನಲ್ಲಿ ಚಲನಚಿತ್ರವಾಗಿ ಬಂದಿದ್ದರೆ, 'ಬದಲಾಗುವ ಬಣ್ಣಗಳು' ಚಲನಚಿತ್ರಗಳಾಗಿ ರೂಪುಗೊಳ್ಳಲು ಹಕ್ಕುಗಳನ್ನು ಪಡೆದು ಚಿತ್ರವಾಗುವ ಹಂತದಲ್ಲಿವೆ.

ಇವರ ಸಾಹಿತ್ಯ ಕೃಷಿಗೆ ಖ್ಯಾತಿಯ ಜೊತೆಗೆ ಹಲವಾರು ಪ್ರಶಸ್ತಿಗಳು ಬಂದಿವೆ. ಕರ್ನಾಟಕ ಸರ್ಕಾರ ಹಾಗು ಸಂಘ ಸಂಸ್ಥೆಗಳು ಪ್ರಶಸ್ತಿಯನ್ನು ನೀಡಿ ಗೌರವಿಸಿವೆ. ಹಂಪಿ ವಿಶ್ವವಿದ್ಯಾಲಯವು ನಾಡೋಜ ಪ್ರಶಸ್ತಿಯನ್ನು ನೀಡಿ ಗೌರವಿಸಿದ್ದರೆ, ೧೯೯೫ರಲ್ಲಿ ಕರ್ನಾಟಕ ಸರ್ಕಾರದ ದಾನಚಿಂತಾಮಣಿ ಪ್ರಶಸ್ತಿ, ೧೯೯೮ರಲ್ಲಿ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಮತ್ತು ರಾಜ್ಯೋತ್ಸವ ಪ್ರಶಸ್ತಿ, ೧೯೯೯ರಲ್ಲಿ ಗುಲ್ಬರ್ಗಾ ವಿಭಾಗ ಮಟ್ಟದ ಉತ್ತಮ ಉಪನ್ಯಾಸಕಿ ಪ್ರಶಸ್ತಿ, ೧೯೯೮ರಲ್ಲಿ ಗುಲ್ಬರ್ಗಾದ ಎಸ್.ಆರ್.ಪಾಟೀಲ್ ಪ್ರತಿಷ್ಠಾನದ ಸಾಹಿತ್ಯ ಪ್ರಶಸ್ತಿ, ೨೦೦೧ರಲ್ಲಿ ಗುಲ್ಬರ್ಗಾದ ಮಹಾಂತ ಜ್ಯೋತಿ ಪ್ರತಿಷ್ಠಾನದ "ಕಾಯಕ ರತ್ನ" ಪ್ರಶಸ್ತಿ, ೨೦೦೧ ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಬಿ.ಸರೋಜದೇವಿ ಪ್ರಶಸ್ತಿ,, ೨೦೦೫ರಲ್ಲಿ ಕರ್ನಾಟಕ ಲೇಖಕಿಯರ ಸಂಘದ ಅನುಪಮಾ ಪ್ರಶಸ್ತಿ ಹಾಗು ಕೋಲ್ಕತ್ತಾದ ಭಾರತೀಯ ಭಾಷಾ ಪರಿಷತ್ತಿನ ೨೦೧೧-೧೨ನೇ ಸಾಲಿನ ರಚನಾ ಸಮಗ್ರ ಸಾಹಿತ್ಯ ಪುರಸ್ಕಾರವು ಇವರಿಗೆ ದೊರೆತಿದೆ. ಈ ಪ್ರಶಸ್ತಿಯನ್ನು ಪಡೆದ ಕನ್ನಡದ ಪ್ರಥಮ ಮಹಿಳೆ ಎಂಬ ಹೆಗ್ಗಳಿಕೆ ಕೂಡ ಗೀತಾ ನಾಗಭೂಷಣ್‌ರಿಗಿದೆ. ಇವೆಲ್ಲಕ್ಕಿಂತ ಮಿಗಿಲಾಗಿ ಇವರು ಬರೆದ 'ಬದುಕು' ಕಾದಂಬರಿಗೆ ೨೦೦೪ರಲ್ಲಿ ಕೇಂದ್ರ ಸಾಹಿತ್ಯ ಆಕಾಡೆಮಿ ಪ್ರಶಸ್ತಿ ಲಭಿಸಿದೆ. ಈ ಪ್ರಶಸ್ತಿಯನ್ನು ಪಡೆದ ಪ್ರಥಮ ಕನ್ನಡ ಲೇಖಕಿ ಹಾಗು  ಕರ್ನಾಟಕ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷ ಪದವಿಯನ್ನಲಂಕರಿಸಿದ ಪ್ರಥಮ ಮಹಿಳೆ ಎಂಬ ಹೆಗ್ಗಳಿಕೆ ಇವರದ್ದಾಗಿದೆ. ೨೦೦೦ರ ಮಾರ್ಚ್‌ನಲ್ಲಿ ಗುಲ್ಬರ್ಗಾದ ಜಿಲ್ಲಾ ಐದನೇ ಕನ್ನಡ ಸಾಹಿತ್ಯ ಅಕಾಡೆಮಿ ಅಧ್ಯಕ್ಷೆ ಜೊತೆಗೆ

೨೦೧೦ರಲ್ಲಿ ಗದಗದಲ್ಲಿ ನಡೆದ ೭೬ನೇ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆಯನ್ನು ಕೂಡ ವಹಿಸಿದ ಹಿರಿಮೆ ಇವರಿಗಿದೆ.

ಈ ರೀತಿಯಾಗಿ ತಮ್ಮದೆ ಗ್ರಾಮ್ಯ ಭಾಷೆಯಲ್ಲಿ ಬರೆದು, ತಮ್ಮ ಬದುಕಿನ ಕಹಿಘಟನೆಗಳನ್ನು ದಾಖಲಿಸಿ, ಕೊಳಗೇರಿಯ ದಲಿತ ಜನರ ಬದುಕು ಬವಣೆಗಳನ್ನು ತಿಳಿಸುತ್ತಲೇ ಸಾಹಿತ್ಯಿಕ ವಲಯದಲ್ಲಿ ಎಲ್ಲಾ ಸಾಹಿತ್ಯಾಸಕ್ತರ ಮನಸ್ಸಿನ, ನೆನಪಿನಾಳದಲ್ಲಿ ಅಚ್ಚಳಿಯದ ಶಾಶ್ವತ ನೆಲೆ ಕಂಡುಕೊಂಡ ಮಹಿಳೆ ಗೀತಾ ನಾಗಭೂಷಣ್‌ರಾಗಿದ್ದಾರೆ.

# ಅಧ್ಯಾಯ-೫

## ೀತಾ ನಾಗಭೂಷಣ್‌ರ ಕಾದಂಬರಿಗಳಲ್ಲಿನ ಸ್ತ್ರೀ

# ಅಧ್ಯಾಯ – ೫

## ಗೀತಾ ನಾಗಭೂಷಣ್‌ರ ಕಾದಂಬರಿಗಳಲ್ಲಿನ ಸ್ತ್ರೀ

ಸಾಹಿತ್ಯವು ನಿಂತ ನೀರಾಗಿ ಇರದೆ ಹರಿಯುವ ನದಿಯಾಗಿ ಬದಲಾವಣೆಗೆ ಒಳಪಡುವಂತದ್ದು. ಸಾಹಿತ್ಯದ ಕಾಲ ಘಟ್ಟಗಳಲ್ಲಿ ಇಪ್ಪತ್ತನೆಯ ಶತಮಾನದ ಸಾಹಿತ್ಯವು ತನ್ನದೇ ಆದ ವಿಶಿಷ್ಟತೆಯನ್ನು ಪಡೆದುಕೊಂಡಿದೆ. ಕಾವ್ಯ, ಕಾದಂಬರಿ, ಕತೆ, ನಾಟಕ, ಪ್ರಬಂಧ, ವಿಮರ್ಶೆ ಮುಂತಾದವುಗಳ ಮೂಲಕ ಅದು ಹೊರಹೊಮ್ಮಿದ್ದು ಶ್ರೀ ಸಾಮಾನ್ಯನ ತುಡಿತ ಮಿಡಿತಗಳಿಗೆ ಹತ್ತಿರವಾದ ಸಾಹಿತ್ಯ ಇಲ್ಲಿದ್ದು ಮಹತ್ವದ ಬೆಳವಣಿಗೆಯನ್ನು ಇಲ್ಲಿ ಕಾಣಬಹುದು.

ವಿಶೇಷವೆಂದರೆ, ಅದುವರೆಗೂ ಪುರುಷನ ಮಿತಿಯಲ್ಲೇ ಬದುಕುತ್ತಿದ್ದ ಸ್ತ್ರೀ ಆಧುನಿಕ–ಶಿಕ್ಷಣಕ್ಕೆ ತನ್ನನ್ನು ತೆತ್ತುಕೊಂಡ ಪರಿಣಾಮದಲ್ಲಿ ಮೈಚಳಿ ಬಿಟ್ಟು ಸಾಹಿತ್ಯ ಕೃಷಿಯಲ್ಲಿ ತೊಡಗಿಸಿಕೊಂಡದ್ದು ತಮ್ಮ ಜೀವನದಲ್ಲಿ ಉಂಡ ನೋವು ನಲಿವುಗಳ ವೈಯಕ್ತಿಕ ಎಳೆಗಳನ್ನು ಬಿಚ್ಚಿಡುವ ಮೂಲಕ ಬರೆಯಲು ತೊಡಗಿದರು. ಇಂತಹ ತಮ್ಮ ಹೆಜ್ಜೆ ಗುರುತುಗಳನ್ನು ದಾಖಲಿಸುವ ಸಂದರ್ಭದಲ್ಲಿ ಭಯವನ್ನು ಬಿಟ್ಟು, ಸಂಕೋಚದ ಪರದೆಗಳನ್ನು ಅತ್ಯಂತ ಜಾಗರೂಕತೆಯಿಂದ ತೆರೆದುಕೊಂಡು ಬರೆಯುತ್ತಿರುವುದು ನಿಜಕ್ಕೂ ವಿಶೇಷವಾದ ಸಂಗತಿಯಾಗುತ್ತದೆ. ಇಂತಹ ಲೇಖಕಿಯರ ಸ್ಥಾನದಲ್ಲಿ ಇರುವವರಲ್ಲಿ ಗೀತಾ ನಾಗಭೂಷಣ್‌ರವರು ಒಬ್ಬರು.

"ಸಾಹಿತ್ಯವೆಂದರೆ ಕೇವಲ ಭಾಷೆಯ ಅಭಿವ್ಯಕ್ತಿ ಮಾತ್ರವಲ್ಲ; ಅದರಲ್ಲಿ ಪ್ರೀತಿಯ ಅಂತರ್ ಸೆಲೆಯಿದೆ" ಎಂಬ ದಿಸೆಯಲ್ಲಿ ಸಾಹಿತ್ಯದ ಹೂವನ್ನು ಮುಡಿಸಿದವರು ಗೀತಾ ನಾಗಭೂಷಣ್. ಆಡುಭಾಷೆ ಮತ್ತು ಗ್ರಾಂಥಿಕ ಭಾಷೆ ಎಂಬ ಮರ್ಜಿಗೆ ಒಳಗಾಗದೆ ತಮ್ಮ ಪ್ರಾದೇಶಿಕ ಗಂಡು ಭಾಷೆಯಲ್ಲಿ ಬರೆದವರು. ಲಿಂಗ ತಾರತಮ್ಯವನ್ನು, ವಿಮರ್ಶೆಯ ಪಕ್ಷಪಾತವನ್ನು, ಸ್ತ್ರೀಪರ ದಾಕ್ಷಿಣ್ಯವನ್ನು, ಮೌಢ್ಯತೆಯ ನೆಲೆಯನ್ನು ಆಧಾರವಾಗಿಟ್ಟುಕೊಂಡು ತಮ್ಮ ಸುತ್ತ ಮುತ್ತಲಿನ ನೈಜ ಘಟನೆಗಳನ್ನು ಎಳೆ ಎಳೆಯಾಗಿ ಬಿಡಿಸಿದವರು. ಮಾನವನ ಸಹಜ ಕಲ್ಪನೆಗಳನ್ನು, ಭಾವನೆಗಳನ್ನು ಅರಗಿಸಿಕೊಂಡು ಕಥೆಯಾಗಿಸಿದವರು.

ಮೊದಲು ಬರೆಯಲು ಪ್ರಾರಂಭಿಸಿದಾಗ ಬಂಡಾಯ ಧೋರಣೆಯ ಬರಹಗಳು ಇರದೆ ಅಂದದ ಚೆಲುವೆಯ ಚೆಂದದ ಬದುಕಿನ ಬಗೆಗೆ ಇರುತಿತ್ತು. 'ನಿನ್ನ ತೋಳುಗಳಲ್ಲಿ', 'ನನ್ನ ಒಲವು ನಿನ್ನ ಚೆಲವು' ಎನ್ನುವ ಕಾದಂಬರಿಗಳನ್ನು ಬರೆದರು. ತದನಂತರ ತಮ್ಮ ಶೈಲಿಯನ್ನು ಬಂಡಾಯದ ಕಡೆಗೆ ತಿರುಗಿಸಿದರು. ಅವರು ಬರೆಯಲು ಕಾರಣ ಅವರ ಬದುಕಿನಲ್ಲಿ ಬಂದ ಕಹಿ, ಕೆಟ್ಟ ಅನುಭವಗಳೇ ಅವರನ್ನು ಬರೆಯಲು ಒತ್ತಾಯ ಮಾಡಿದವು ಅನ್ನುವುದು ಮಾತ್ರ ಸತ್ಯ.

ಗೀತಾ ನಾಗಭೂಷಣ್ ಒಂದು ಕಡೆ ಹೀಗೆ ಹೇಳುತ್ತಾರೆ 'ನನ್ನ ವೈಯಕ್ತಿಕ ನೋವುಗಳು ಕೂಡ ನನ್ನ ಬರಹಕ್ಕೆ ಒಂದು ರೀತಿಯಿಂದ ನೀರೆರೆದು ಬೆಳೆಸಿವೆಯೆನ್ನಬಹುದು. ಇಂಥ ನೋವುಗಳು ನನ್ನನ್ನು ಕಾಡಿ ತಲ್ಲಣಗೊಳಿಸಿರದಿದ್ದರೆ ನಾನು ಇಷ್ಟುಗಟ್ಟಿಯಾದ ಸಾಹಿತ್ಯ ಸೃಷ್ಟಿಸುತ್ತಿದ್ದಿರಲಿಲ್ಲವೇನೋ, ನೋವು, ಸಂಘರ್ಷವಿಲ್ಲದ ಜೀವನ ಅದೆಂಥ ಜೀವನ.'[೧] ಎಂದು ಹೇಳುವ ಅವರು ಸಾಹಿತ್ಯಕ್ಕೂ ಹಾಗೂ ನೋವಿಗೂ ಸಂಬಂಧ ಕಲ್ಪಿಸುತ್ತಾರೆ.

ಮಹಿಳೆಗೆ ತನ್ನ ಬದುಕಿನಲ್ಲಿ ಕಲ್ಪನೆ ಮತ್ತು ವಾಸ್ತವಗಳನ್ನು, ಸಮರಸದಿಂದ ಸಂಯೋಜಿಸಿಕೊಳ್ಳುವ ಅನಿವಾರ್ಯತೆ ಇರುವುದರಿಂದ ಅವಳಲ್ಲಿ ಸಹಜವಾಗಿಯೇ ಲಯಬದ್ಧ, ಸಮತೋಲನದ ಸಾಹಿತ್ಯ ರಚನಾ ಸಾಮರ್ಥ್ಯ ನೆಲೆಗೊಂಡಿರುತ್ತದೆ. ಗೀತಾ ನಾಗಭೂಷಣ್‌ರವರು ಕೂಡ ಇದೇ ರೀತಿ ಪ್ರಸ್ತುತ ಸಮಾಜದಲ್ಲಿ ನಡೆಯುವ ವಸ್ತುವೊಂದನ್ನು ಆಯ್ಕೆ ಮಾಡಿಕೊಂಡು ಅದರ ಬಗ್ಗೆ ವಿಶಿಷ್ಟವಾದ ಶೈಲಿಯಲ್ಲಿ ಅದನ್ನು ಅಭಿವ್ಯಕ್ತಿಸುತ್ತಾರೆ.

ಯಾವುದೇ ಒಬ್ಬ ಲೇಖಕ ಅಥವಾ ಲೇಖಕಿ ತನ್ನ ಸಮುದಾಯದ, ತನ್ನ ಸಮಾಜದ ಬದುಕಿಗೆ, ಆ ಸಮಾಜದ ಅವಿಭಾಜ್ಯ ಅಂಗವಾಗಿದ್ದು ಪ್ರತಿಸ್ಪಂದಿಸಿದಾಗ ಅಂತಹ ಸಂವಹನದಲ್ಲಿ, ವಾಸ್ತವತೆ, ಕಳಕಳಿ, ಪ್ರತಿಭಟನೆಗಳು ಸಹಜವಾಗಿ ಹೊರ ಹೊಮ್ಮುತ್ತವೆ. ಇದನ್ನು ತನ್ನ ಸಮಾಜದ ಒಳಗೆ ನಿಂತು, ಅಭಿವ್ಯಕ್ತಿಸಿದಾಗ ವಸ್ತು ಸ್ಥಿತಿಗೆ ಹತ್ತಿರವಾಗುತ್ತದೆ. ಆದರೆ ತನ್ನ ಸಮುದಾಯದ ಹೊರಗೆ ನಿಂತು, ಸಮುದಾಯದ ಚಿತ್ರಣವನ್ನು ಕಟ್ಟಿಕೊಡುವಾಗ, ಅಭಿವ್ಯಕ್ತಿಯಲ್ಲಿನ ಸಾಂದ್ರತೆ ಸಾಧ್ಯವಾಗುವುದಿಲ್ಲ, ಉತ್ತರ ಕರ್ನಾಟಕದ, ಗುಲ್ಬರ್ಗ ಪ್ರದೇಶದ, ಕೆಳವರ್ಗದವರ ಜನಜೀವನದ ದಟ್ಟ ಚಿತ್ರಣ, ಅತ್ಯಂತ ಸಹಜವಾಗಿ ತಮ್ಮ ಕಾದಂಬರಿಗಳಲ್ಲಿ ಮೂಡಿಸಿಕೊಂಡಿರಲು ಕಾರಣ ಗೀತಾಭೂಷಣ್‌ರವರು ತಮ್ಮನ್ನು ತಾವು ಸಮಾಜದ ಅವಿಭಾಜ್ಯ ಅಂಗವನ್ನಾಗಿ ಮಾಡಿಕೊಂಡಿರುವುದರಿಂದ[೨] ಗೀತಾನಾಗಭೂಷಣ್ ಸಮಾಜದ ಅಲಕ್ಷಿತ ವರ್ಗದಲ್ಲಿ ಒಬ್ಬರಾಗಿ ಹುಟ್ಟಿ ತಾವು ಅನುಭವಿಸಿದ ನೋವಿನ ಯಾತನೆಯ ಜೀವನವನ್ನು ಬರೆದರು. ಗೀತಾರವರು ಹಿಂದುಳಿದ ಜನಾಂಗದಿಂದ ಬಂದ ಬಡ ಕುಟುಂಬದವರಾಗಿದ್ದು ತಾವು ತಮ್ಮ ಬದುಕಿನಲ್ಲಿ ಉಂಡು ಅನುಭವಿಸಿದ ನೋವುಗಳನ್ನು ಅಭಿವ್ಯಕ್ತಿಸುತ್ತಲೇ ಸಾಹಿತ್ಯ ಕೃಷಿಯನ್ನು ಮಾಡಿದರು. ನಮ್ಮ ದೇಶದಲ್ಲಿ ಮಹಿಳೆಯರ ಸಾಧನೆಗಳ ಬಗ್ಗೆಯಾಗಲಿ, ಅವರ ಯಶಸ್ಸಿನ ಕ್ಷಣಗಳ ಬಗ್ಗೆಯಾಗಲೀ ಅಥವಾ ಅವರು ಸಾಮಾಜಿಕವಾಗಿ, ಶೈಕ್ಷಣಿಕವಾಗಿ ಎದುರಿಸುತ್ತಿರುವ ಸಮಸ್ಯೆಗಳ ಬಗ್ಗೆಯಾಗಲೀ, ಯಾವುದೇ ಗಹನವಾದಂತಹ, ಹೆಣ್ಣಿನ ಜೀವನದ ವಿವಿಧ ಮಜಲುಗಳನ್ನು ತಿಳಿಸುವಂತಹ ಪುಸ್ತಕಗಳು ಬಹಳ ವಿರಳವೆಂತಲೇ ಹೇಳಬಹುದು.

---

೧. ಕೆ.ಉಷಾ.ಪಿ.ರೈ ಮತ್ತು ಕೆ.ಎಂ.ವಿಜಯಲಕ್ಷ್ಮೀ : ಲೇಖಲೋಕ -೪: ಪುಟ ೩೯. ಕರ್ನಾಟಕ ಲೇಖಕಿಯರ ಸಂಘ:೨೦೦೩.
೨. ಎಲ್.ವಿ.ಶಾಂತಕುಮಾರಿ: ಗೀತಾ ನಾಗಭೂಷಣ್ : ಪುಟ ಸಂಖ್ಯೆ-೦೨.ಸಪ್ನ ಬುಕ್ ಹೌಸ್ : ೨೦೧೧.

ಹೆಣ್ಣಿಗೆ ಅತ್ಯಂತ ಗೌರವದ ಸ್ಥಾನ ಇರುವುದು ಭಾರತದಲ್ಲಿಯೇ. ಹಾಗೆಯೇ ಹೆಣ್ಣು ಬಹಳ ಶೋಷಿತಳಾಗುತ್ತಿರುವುದೂ, ದೌರ್ಜನ್ಯಗಳ ದಳ್ಳುರಿಗೆ ಸಿಲುಕಿ ಒದ್ದಾಡುತ್ತಿರುವುದೂ ಭಾರದದಲ್ಲಿಯೇ ಎನ್ನುವುದು ಸತ್ಯ[೩].

ಪ್ರಸ್ತುತ ಸಂದರ್ಭದಲ್ಲಿ ಹಲವಾರು ರಾಷ್ಟ್ರಗಳು ಮಹಿಳೆಯರ ಸರ್ವತೋಮುಖ ಅಭಿವೃದ್ಧಿಗಾಗಿ ಶ್ರಮಿಸುತ್ತಿವೆ. ಆದರೂ ಅವರ ಜೀವನ ಚಕ್ರದ ಪರ್ಯಂತ ಅನೇಕ ರಾಷ್ಟ್ರಗಳಲ್ಲಿ ಸರಿಸಮಾನವಾದ ಮಾರ್ಗಗಳನ್ನು, ಅತ್ಯಾವಶ್ಯಕವಾದ ವಿಧಾನಗಳನ್ನು ಪಡೆಯಲು ವಿಫಲರಾಗಿದ್ದಾರೆ. ಸಂಸಾರದ ಜವಾಬ್ದಾರಿಯಲ್ಲಿ ಹೆಣ್ಣಿಗಿಂತ ಗಂಡಿಗೆ ಹೆಚ್ಚು ಪ್ರಾಧಾನ್ಯತೆ, ಸ್ಥಾನಮಾನಗಳನ್ನು ಕೊಟ್ಟಿರುವುದರಿಂದ ಮಹಿಳೆಯರಿಗೆ ತಿಳುವಳಿಕೆ ಮತ್ತು ಲೋಕಜ್ಞಾನ ಕಡಿಮೆ ಆಗಿದೆ.

ಭಾರತದ ಮಹಿಳೆ ಶತಶತಮಾನಗಳಿಂದಲೂ ಸಂಕಟ ಶೋಷಣೆಗಳಿಂದ ಮುಕ್ತವಾಗಲು ಎಣಗುತ್ತಿರುವ ಸಂದರ್ಭದಲ್ಲಿ ಸಾಹಿತ್ಯವು ಸ್ವಲ್ಪ ಮಟ್ಟಿಗೆ ನಿರಾಳವನ್ನು ಒದಗಿಸಿತು. ಬದಲಾವಣೆಗಳಿಗೆ ಒಳಪಟ್ಟ ಹಾಗೆ ಸ್ತ್ರೀವಾದವೂ ಮೂಡಿ ಬಂತು. ಪುರುಷ ಪ್ರಧಾನವಾಗಿರುವ ಸಮಾಜದಲ್ಲಿ ಕೌಟುಂಬಿಕತೆಯ ನಿಯಮಗಳಿಗೆ ಒಳಪಟ್ಟೇ ಸಾಹಿತ್ಯವನ್ನು ಕರಗತಗೊಳಿಸಿ ಎಲ್ಲಾ ಪ್ರಕಾರಗಳಲ್ಲೂ ಸಾಹಿತ್ಯ ಕೃಷಿಯನ್ನು ಮಾಡಿರುವವರು ಗೀತಾ ನಾಗಭೂಷಣ್‌ರವರು.

ತಮ್ಮ ಎಲ್ಲಾ ಪ್ರಕಾರದ ಸಾಹಿತ್ಯಗಳಲ್ಲೂ ಹೆಚ್ಚಾಗಿ ಎಟುಕುವ ಪಾತ್ರಗಳೆಂದರೆ ಮಹಿಳೆ. ಮಹಿಳೆಯರ ಪರವಾದ ಧೋರಣೆಗಳನ್ನು ಎತ್ತುವವರ ಸಂಖ್ಯೆ ವಿರಳವಾಗಿರುವ ಸಂದರ್ಭದಲ್ಲಿ ಸ್ತ್ರೀಪರವಾದ ಧೋರಣೆಯನ್ನು ಮಾಡಿದವರು ಗೀತಾನಾಗಭೂಷಣ್‌ರವರು. ಇವರು ತಮಗಿಂತಲೂ ಮೊದಲೇ ಇದ್ದ ಲೇಖಕಿಯರು ಮತ್ತು ಅವರ ಸಾಹಿತ್ಯದ ಬಗ್ಗೆ ತಿಳಿಸಿದ್ದಾರೆ. ಉಂಡುಟ್ಟು ತಿಂದು ತೇಗಿ ಸುಖದ ಬದುಕು ಬದುಕಿದವರು. ಹಸಿವು, ಹಿಂಸೆ, ಅಪಮಾನ, ಹೋರಾಟಗಳಿಗೆ ಅಪರಿಚಿತರು. ಹೊಟ್ಟೆಗಾಗಿ ಮೈಬಗ್ಗಿಸಿ ದುಡಿಯುವ ಹಂಗೇ ಇಲ್ಲದ ಅವರಿಗೆ ಬದುಕುವಿಕೆಗಾಗಿ ಬಡಿದಾಡುವ ಜರೂರತ್ತೆ ಇರಲಿಲ್ಲ. ಹೀಗಾಗಿ ತಣ್ಣಗಿನ ಮನೆಯಲ್ಲಿ ಕುಳಿತು, ನುಣ್ಣನೆಯ ಬಾಳುವೆ ಬಾಳುವ ಈ ಲೇಖಕಿಯರು ಬರೆದದ್ದು ಬರೀ ಸುಖಾಂತ್ಯದ, ಮನರಂಜನೆಯ, ಸಿನಿಮಾದ ಕಾದಂಬರಿಗಳೇ. ಇವೆಲ್ಲವು ಹೊತ್ತು ಕಳೆಯುವ ಸರಕುಗಳಾಗಿ ಹಣಗಳಿಕೆಯೇ ಹುನ್ನಾರಗಳಾದವು. ಹೆಸರು ಗಳಿಸುವ ಪ್ರಚಾರಕ್ಕಿಳಿದವು. ಇದರಲ್ಲಿ ಒಂದು ಮಾತು ಮಾತ್ರ ನಿಜ. ಈ ಲೇಖಕಿಯರು ಜನರಿಗೆ ಓದುವ ಚಟ ಅಂಟಿಸುವಲ್ಲಿ ಸಫಲರಾದರು, ಓದುವ ಹವ್ಯಾಸವನ್ನು ಜನರಲ್ಲಿ ಚಟ ಹುಟ್ಟಿಸಿದರು. ಒಂದು

೩. ಪ್ರವೀಣ್ ಫರ್ನಾಂಡಿಸ್ : ೨೧ನೇ ಶತಮಾನದಲ್ಲಿ ಮಹಿಳೆ ಸಮಾನತೆ, ಅಭಿವೃದ್ಧಿ, ಶಾಂತಿ : ಮುನ್ನುಡಿಯಲ್ಲಿ ಕೆ.ಉಷಾ.ಪಿ.ರೈ.

ಸಂದರ್ಭದಲ್ಲಿ ಇವರ ಕಾದಂಬರಿಗಳು ಬಾಳೆಹಣ್ಣು ಉಪ್ಪಿಟ್ಟಿನ ಕಾದಂಬರಿಗಳೇ ಎಂದು ವಿಮರ್ಶಿಸುವ ರೀತಿ ಇತ್ತು. ಅವರು ಬರೆದದ್ದೆಲ್ಲ ಮಧ್ಯಮ ವರ್ಗದ ಮಹಿಳೆಯರ ಬಗ್ಗೆಯೇ ವಿನಃ ಬಡವರ ಬಗ್ಗೆಯಲ್ಲ. ಉಂಡುಟ್ಟವರ ಬಗ್ಗೆಯೇ ವಿನಃ ಉಪವಾಸವಿದ್ದವರ ಬಗ್ಗೆಯಲ್ಲ. ಕೆಳಜಾತಿಯ ನಿರ್ಗತಿಕರನ್ನು ಕುರಿತು ಅಲ್ಲ. ಕೆಲವು ಬ್ರಾಹ್ಮಣ ಮೂಲದ ಗಂಡಸರು ಬರೆದಂತೆ ದಲಿತ ಲೋಕದ ಯಾತನೆಯ ಬದುಕಿನ ಬಗ್ಗೆ ನಮ್ಮ ಈ ಮಹಿಳೆಯರ್‍ಯಾರು ಬರೆಯುವ ಜವಬ್ದಾರಿ ಹೊರಲೇ ಇಲ್ಲ.[೪]

ಹೀಗೆ ಎಲ್ಲರು ಮನರಂಜನಾತ್ಮಕ ಕಾದಂಬರಿಗಳನ್ನು ಬರೆಯುವ ಸಂದರ್ಭದಲ್ಲಿ ಗೀತಾನಾಗಭೂಷಣ್ ಅದನ್ನು ಹೊರತುಪಡಿಸಿ ಸ್ತ್ರೀಯರ ಜೀವನ, ಸಮಸ್ಯೆಗಳು ಹಾಗೂ ದೇವರ ಹೆಸರಿನಲ್ಲಿ ಶೋಷಣೆ ಮುಂತಾದ ಅಂಶಗಳನ್ನು ಕೇಂದ್ರಿಕರಿಸಿಕೊಂಡು ಬರೆದರು. ಈ ಚಿತ್ರಣವು ಹೆಚ್ಚಾಗಿ 'ಹಸಿಮಾಂಸ ಮತ್ತು ಹದ್ದುಗಳು', 'ಮಾಪುರ ತಾಯಿಯ ಮಕ್ಕಳು', ಧುಮ್ಮಸು', 'ದಂಗೆ', ಆಸರೆ, 'ಬದುಕು' 'ಕಾಗೆ ಮುಟ್ಟಿತು' ಕಾದಂಬರಿಗಳಲ್ಲಿ ಕಾಣಬಹುದಾಗಿದೆ.

'ಹೆಣ್ಣಿನ ಕೂಗು' ಎಂಬ ಹೆಸರಿನಲ್ಲಿ ಚಲನಚಿತ್ರವಾಗಿರುವ ಇವರ ಕಾದಂಬರಿ 'ಹದ್ದುಗಳು ಮತ್ತು ಹಸಿಮಾಂಸ' ದಲಿತ ಹೆಣ್ಣಿನ ಚಿತ್ರಣವಾಗಿದೆ. ಜೊತೆ ಜೊತೆಗೆ ಹಳ್ಳಿಯ ಅನಕ್ಷರಸ್ತರಾದ ದಲಿತ ಜನರನ್ನು ಅದೇ ಊರಿನ ಮೇಲ್ವರ್ಗದ ಶ್ರೀಮಂತರು ಯಾವ ರೀತಿ ಆ ಜನರಿಗೆ ಶೋಷಣೆಯನ್ನು ಮಾಡುತ್ತಾರೆ, ಚಿತ್ರಹಿಂಸೆಯನ್ನು ಕೊಟ್ಟು ಬದುಕಲೂ ಬಿಡದೆ ಸಾಯಲೂ ಬಿಡದೆ ಕ್ರೂರವಾಗಿ ನಡೆದುಕೊಳ್ಳುತ್ತಾರೆ ಎಂಬುದರ ಚಿತ್ರಣವೂ ಇಲ್ಲಿದೆ.

ಈ ಕಾದಂಬರಿಯ ಮುಖ್ಯ ಪಾತ್ರದಾರಿ ಲಕ್ಷ್ಮಿ ಅವಳು ಬಾಲ್ಯದಿಂದ ಕೊನೆಯ ತನಕ ಯಾವ ರೀತಿ ಬವಣೆಗಳಲ್ಲೆ ಬದುಕುತ್ತಾಳೆ ಎಂಬುದಾಗಿದೆ. ಹುಟ್ಟಿನೊಡನೆ ಸಾವು ಅನಿವಾರ್ಯ, ಕಷ್ಟಗಳು ಕೂಡ ಬರುತ್ತವೆ. ಆದರೆ ಕಷ್ಟಗಳೇ ಜೀವನವಾದರೆ ಹೇಗೆ ಇಲ್ಲಿನ ಕಥಾನಾಯಕಿಯು ಅದಕ್ಕೊಂದು ನಿದರ್ಶನವಾಗಿ ಕಷ್ಟಗಳಲ್ಲೇ ಬೇಯುತ್ತಾಳೆ.

ಲಿಂಗಭೇದ ನೀತಿಯಿಂದ ಏರ್ಪಟ್ಟಿರುವ ಸ್ತ್ರೀ ಪುರುಷರ ನಡುವಿನ ಅಸಮಾನತೆ ಮನುಷ್ಯ-ಮನುಷ್ಯರ ನಡುವಿನ ಸಹಜವಾದ ಸಂಬಂಧಗಳನ್ನು ಹಾಳುಮಾಡುತ್ತದೆ. ಬಡತನದ ಬವಣೆಯಲ್ಲಿ ಬದುಕುತ್ತಿದ್ದ ಫಕೀರಪ್ಪನ ಹೆಣ್ಣು ಮಗಳೇ ಲಕ್ಷ್ಮಿ. ಪುರುಷ ಪ್ರಧಾನ ಸಮಾಜದಲ್ಲಿ ಹೆಣ್ಣಾಗಿ ಹುಟ್ಟುವುದೇ ತಪ್ಪು. ಅಂತಹದ್ದರಲ್ಲಿ ಬಾಲ್ಯದಲ್ಲೆ ತನ್ನ ಅಪ್ಪ-ಅಮ್ಮನನ್ನು ಕಳೆದುಕೊಂಡು ನಿರ್ಗತಿಕಳಾದರೆ ಗತಿಯೇನು?. ಪೋಷಕರು ಇರುವ ಮಕ್ಕಳು ಸುಖ ಜೀವನ ನಡೆಸುವುದು ಕಷ್ಟವಾಗಿರುವ ಈ ಕಾಲದಲ್ಲಿ ಲಕ್ಷ್ಮಿ ತಬ್ಬಲಿಯಾಗಿ ಕಷ್ಟದಲ್ಲೇ ಬೆಳೆಯುತ್ತಾಳೆ. ಯೌವ್ವನ ಕಾಲಿಟ್ಟು ಕನಸು ಆಸೆಗಳು ಹೆಚ್ಚಾದ ಹಾಗೆ ಇವಳ ಮನಸ್ಸನ್ನು

---

೪. ಕೆ.ಉಷಾ.ಪಿ.ರೈ ಮತ್ತು ಕೆ.ಎಂ.ವಿಜಯಲಕ್ಷ್ಮೀ : ಲೇಖಿಲೋಕ -೪: ಪುಟ ೪೬. ಕರ್ನಾಟಕ ಲೇಖಕಿಯರ ಸಂಘ:೨೦೦೩.

ಅರಿತವನು, ಸುಖ ಜೀವನ ನೀಡಲು ಬಂದವನು ಕಾಶೀನಾಥ. ಎಲ್ಲರ ಅಂದಚೆಂದವನ್ನು ತನ್ನೊಬ್ಬಳಲ್ಲಿಯೇ ತುಂಬಿಕೊಂಡ ಚೆಲುವೆ. ಈ ಚೆಲುವು ಕಾಶೀನಾಥನೊಬ್ಬನ ಕಣ್ಣಿಗೆ ಕಾಣದೆ ಊರಿನ ಕಾಮುಕ ಜನರ ಕಣ್ಣನ್ನು ಕುಕ್ಕಿತು. ಊರಿನ ಹಿರಿಯರಲ್ಲಿ ಒಬ್ಬನಾದ ಕುಲಕರ್ಣಿಯು ತನಗೆ ಸಿಗಲಿಲ್ಲವೆಂಬ ಕೋಪಕ್ಕೆ ಅವಳ ಮೇಲೆ ಒಳಗೊಳಗೆ ಕೆಂಡ ಕಾರಿಕೊಳ್ಳುತ್ತಾನೆ.

ಇದ್ದದರಲ್ಲಿ ನೆಮ್ಮದಿಗೆ ನಾಂದಿ ಹಾಡಿದ್ದ ಲಚ್ಚಿಯ ಜೀವನ ಇಲ್ಲಿಂದ ಬಿರುಗಾಳಿಗೆ ಸಿಕ್ಕ ತರಗೆಲೆಯಾಗುತ್ತದೆ. ಕುಂಬಳಕಾಯಿ ಕಳ್ಳತನ ಮಾಡಿದಳೆಂದು ಆರೋಪ ಹೊರಿಸಿ ಕುಲಕರ್ಣಿ ಆಕೆಯನ್ನು ಜೈಲಿಗೆ ಕಳುಹಿಸುತ್ತಾನೆ. ಮಾಡದ ತಪ್ಪಿಗೆ ಬಂಧನಕ್ಕೊಳಗಾಗಿ ವೇದನೆ ಪಡುತ್ತಿರುವ ಸಂದರ್ಭದಲ್ಲಿ ಮತ್ತೊಂದು ಆಪತ್ತು ಎದುರಾಗುತ್ತದೆ. 'ಬೇಲಿಯೆ ಎದ್ದು ಹೊಲ ಮೇಯ್ದಂತೆ' ರಕ್ಷಿಸಬೇಕಾದವರೇ ಶಿಕ್ಷಿಸುತ್ತಾರೆ. ಜೈಲಿನಲ್ಲಿ ಲಚ್ಚಿ ಪೋಲಿಸ್ ಅಧಿಕಾರಿಗಳಿಂದಲೆ ಅತ್ಯಾಚಾರಕ್ಕೆ ಒಳಗಾಗುತ್ತಾಳೆ. "ಹರ ಕೊಲ್ಲಲ್ ಪರ ಕಾಯ್ವನೆ" ಎಂಬಂತೆ ಕಾಪಾಡಬೇಕಾದ ಕೈಗಳೇ ಬಲತ್ಕಾರ ಮಾಡಿದರೆ ಯಾರಿಗೆ ತಾನೇ ತನ್ನ ಕಷ್ಟವನ್ನು ಹೇಳಿಕೊಳ್ಳಬೇಕು.

ಶಿಕ್ಷೆಯನ್ನು ಅನುಭವಿಸಿ ನೆಮ್ಮದಿಯ ಜೀವನ ಬಂತೆಂದ್ದು ಜೈಲಿನಿಂದ ಬಿಡುಗಡೆಯಾಗುತ್ತಾಳೆ. ತನ್ನ ಪ್ರಿಯಕರನ ಬಳಿ ಸೇರಿಕೊಳ್ಳಲು ಹುಟುಕಾಟ ಆರಂಭಿಸುತ್ತಾಳೆ. ಕಾಶೀನಾಥನು ಎಲ್ಲಿಯೂ ಕಾಣದೇ ಇದ್ದಾಗ ಆಶ್ರಯವನ್ನು ಪಡೆಯುವ ಸಮಸ್ಯೆ ಎದುರಾಗುತ್ತದೆ. ಸಮಾಜದಲ್ಲಿ ಕಾಗೆ ಹದ್ದುಗಳೇ ಹೆಚ್ಚಾಗಿರುವ ಸಂದರ್ಭದಲ್ಲಿ ಒಂಟಿ ಹೆಣ್ಣು ಬದುಕು ನಡೆಸುವುದು ಹೇಗೆಂದು ಬಹಳವಾಗಿ ಯೋಚಿಸಿ ಕೊನೆಗೆ ಮಹಿಳೆಯರೇ ನೆಲೆಸಿರುವ 'ಸ್ತ್ರೀ ನೀಕೇತನ'ದಲ್ಲಿ ಆಶ್ರಯವನ್ನು ಪಡೆಯುತ್ತಾಳೆ. ಸ್ತ್ರೀಯರೇ ನೆಲೆಸಿದ್ದ ಸ್ತ್ರೀನೀಕೇತನ ನೆಮ್ಮದಿಯ ಬದುಕನ್ನು ನೀಡಬಹುದು ಎಂದು ನಿರ್ಭೀತಿಯಿಂದ ಇದ್ದಾಗ. ಇಲ್ಲಿನ ಮೇಲ್ವಿಚಾರಕಿ ಹೆಣ್ಣೇ ಆಗಿದ್ದು ಲಕ್ಷ್ಮಿಯನ್ನು ಮೈ ಮಾರಿಕೊಳ್ಳುವ ದಂದೆಗೆ ಬಲವಂತವಾಗಿ ನೂಕುತ್ತಾಳೆ. ಬದುಕು ಮೂರಾಬಟ್ಟೆಯಾಗಿ ಕಾಮುಕರಿಗೆ ಬಲಿಯಾಗುತ್ತಾಳೇ. ಮೈ ಮಾರಿಕೊಳ್ಳುವ ಕೆಲಸ ಅವಳಿಗೆ ದುಃಖವನ್ನು ತರಿಸಿ ಅಳುವ ಆಕ್ರಂದನ ಮುಗಿಲು ಮುಟ್ಟುತ್ತದೆ.

ಹೀಗೆ ಸಾಗುತ್ತಿದ್ದ ಅವಳ ಜೀವನ ಮತ್ತೊಂದು ತಿರುವು ಪಡೆದುಕೊಳ್ಳುತ್ತದೆ. ಗಂಡ ಮಕ್ಕಳು ಎಂಬ ಸಂಸಾರವಾದರೆ ಈ ಗೋಳು ದೂರಾಗಬಹುದೆಂದುಕೊಂಡಳು. ಬಸಣ್ಣ ಎಂಬ ವಿಧುರನ ಜೊತೆ ಲಕ್ಷ್ಮಿಯ ವಿವಾಹವಾಗುತ್ತದೆ. ತನ್ನ ಹಿನ್ನೆಲೆ ತಿಳಿದ ಬಸಣ್ಣ ಮದುವೆಯಾಗುತ್ತಿದ್ದಾನೆ ಎಂದು ಲಕ್ಷ್ಮಿ ತಿಳಿದಿರುತ್ತಾಳೆ. ತಾನು ಗೃಹಿಣಿಯಾಗಿರುವುದರಿಂದ ಸಮಾಜದ ಕಾಮುಕರ ಕೆಟ್ಟ ಕಣ್ಣು ತನ್ನ ಮೇಲೆ ಬೀಳುವುದಿಲ್ಲವೆಂದುಕೊಂಡ ಲಕ್ಷ್ಮಿಯ ಜೀವನ 'ಬಾಣಲೆಯಿಂದ ಬೆಂಕಿಗೆ' ಎನ್ನುವ ಸ್ಥಿತಿಯಾಗುತ್ತದೆ. ಲಕ್ಷ್ಮಿಯ ಗಂಡ ವಿಚಿತ್ರವಾದ

ತೃಷೆಯುಳ್ಳ ವ್ಯಕ್ತಿಯಾಗಿದ್ದನು. ಇದರಿಂದ ಪ್ರತಿದಿನ ಇವನಿಂದ ದೈಹಿಕ ಹಿಂಸೆಗೆ ಒಳಗಾಗುತ್ತಾಳೆ. ಲಕ್ಷ್ಮಿಯನ್ನು ಗಂಡ ಪ್ರತಿದಿನ ನಾಯಿಯ ರೀತಿಯಲ್ಲಿ ಅವಳ ಮೈಯನ್ನು ನೆಕ್ಕುತ್ತಿದ್ದ. ಗಿಡುಗನ ರೀತಿಯಲ್ಲಿ ಅವಳ ಮೈಯನ್ನು ಹಿಡಿದು ಹಿಂಡಿ ಹಿಪ್ಪೆ ಮಾಡುತ್ತಿದ್ದನು. ರಣಹದ್ದಿನ ರೀತಿಯಾಗಿ ಅವಳ ಮೃದುವಾದ ಶರೀರದ ಮೇಲೆರಗಿ ಮಾಂಸವನ್ನು ಕುಕ್ಕುತ್ತಿದ್ದನು. ಇವನ ವಿಚಿತ್ರ ರೀತಿಯ ಚಿತ್ರಹಿಂಸೆಯನ್ನು ಸಹಿಸಿಕೊಂಡು ಲಕ್ಷ್ಮಿ ಬದುಕು ಸವೆಸುತ್ತಾಳೆ. ಲಕ್ಷ್ಮಿಯ ಹಿನ್ನೆಲೆ ಜೀವನವು ಗೊತ್ತಾದ ನಂತರ ಬಸವಣ್ಣನು ರಾಕ್ಷಸನಾಗಿ ಶೀಲವನ್ನು ಶಂಕಿಸಿ ಮನೆಯಿಂದ ಹೊರದೂಡುತ್ತಾನೆ. ಬಸುರಿಯಾದ ಲಕ್ಷ್ಮಿ ಗಂಡು ಮಗುವಿಗೆ ಜನ್ಮ ನೀಡುತ್ತಾಳೆ. ತನಗೆ ಹುಟ್ಟಿದ ಗಂಡು ಮಗು ಕ್ರೂರಿ, ಶೋಷಕ ಗಂಡುಗಳ ಪ್ರತಿನಿಧಿಯಂತೆ, ಮುಂದೆ ಹೆಣ್ಣು ಮಕ್ಕಳ ಬಾಳನ್ನು ಹಾಳು ಮಾಡುವ ರಕ್ಕಸನಂತೆ ಕಂಡು ಬರುತ್ತಾನೆ. ಆದೇ ನೋವುಗಳು ಪದೇ ಪದೇ ಕಾಡಿ ಲಚ್ಚಿಯನ್ನು ಹುಚ್ಚಿಯನ್ನಾಗಿತು. ತನ್ನ ಕಷ್ಟಗಳಿಗೆ ಪರಿಹಾರವೆಂದರೆ ಸಾವು ಒಂದೇ ಮಾರ್ಗವೆಂದು ನಿರ್ಧರಿಸಿ ಆತ್ಮಹತ್ಯೆಗೆ ಮುಂದಾಗುತ್ತಾಳೆ. ಮಗುವನ್ನು ಎತ್ತಿಕೊಂಡು ಬಾವಿಯ ಬಳಿ ಬಂದು ಬಾವಿಗೆ ಬೀಳುತ್ತಾಳೆ. "ಪಾಪಿ ಸಮುದ್ರಕ್ಕೆ ಹೋದರು ಮೊಳಕಾಲು ಉದ್ದ ನೀರು" ಎಂಬಂತೆ ಇಲ್ಲಿ ಮಗುವಿನ ಪ್ರಾಣ ಹೋಗಿ ಲಚ್ಚಿ ಉಳಿದುಕೊಳ್ಳುತ್ತಾಳೆ.

'ದುಮ್ಮಸ್ಸು' ಕಾದಂಬರಿ ಕೂಡ ಇದೇ ರೀತಿ ಹೆಣ್ಣಿನ ಶೋಷಣೆಯ ವಿವಿಧ ಮಜಲುಗಳ ಕಾದಂಬರಿಯಾಗಿದೆ. ಇವಳ ಜೀವನವು ರಣಹದ್ದುಗಳು ಹಸಿಮಾಂಸವನ್ನು ಕುಕ್ಕಿ ಕುಕ್ಕಿ ತಿನ್ನುವಂತೆ ಇವಳ ಮೇಲೆ ಕುಲಕರ್ಣಿ, ಖಾಕಿಧಾರಿಗಳು, ಗಂಡ ಎಲ್ಲರೂ ಇವಳ ದೇಹವನ್ನು ಕುಕ್ಕಿ ತಿಂದು ನರಕಯಾತನೆಗೆ ನೂಕುತ್ತಾರೆ. ಹೆಣ್ಣಿನ ಆಸೆ ಆಕಾಂಕ್ಷೆಗಳನ್ನು ನೋಡದ ಸಮಾಜದ ರೌದ್ರತೆ ಇಲ್ಲಿಯ ವಸ್ತುವಾಗಿದೆ.

'ಬದುಕು' ಕಾದಂಬರಿಯಲ್ಲಿನ ಹೆಣ್ಣಿನ ಸ್ಥಿತಿ ಕೂಡ ಇದೇ ರೀತಿಯದು. ಅಪಾರ ಯಾತನೆಗೊಳಗಾದ ಮಲ್ಲವ್ವ ಸಂಸಾರದ ಸೆಳೆತದಲ್ಲಿ ಸಿಲುಕಿ ಒದ್ದಾಡಿ ಸಾಯುವ ಚಿತ್ರಣ. ಪ್ರೀತಿಸಿದವನನ್ನು ಮದುವೆಯಾಗಲಾಗದೆ ಜಾತಿಯ ವ್ಯವಸ್ಥೆಯಿಂದ ಮಿಡಿದ ಹೃದಯಗಳು ಬೇರೆ ಆಗುವುದು. ಕಲ್ಯಾಣಿ ಜೈಲಿನಲ್ಲಿದ್ದಾಗ ಸಂಸಾರದ ಜವಾಬ್ದಾರಿಯನ್ನು ನಿರ್ವಹಿಸಬೇಕಾದ ಅನಿವಾರ್ಯತೆ ಇರುವ ಬೆಳ್ಳಿ. ಗಂಡು ದಿಕ್ಕಿಲ್ಲದ ಮನೆಗೆ ಕಾಮುಕರು ಯಾವ ರೀತಿ ಬರುತ್ತಾರೆ. ಹಣ ಪ್ರಭಾವವಿರುವವರು ಯಾವ ರೀತಿ ತನ್ನತ್ತ ಸೆಳೆದುಕೊಳ್ಳಲು ಪ್ರಯತ್ನಿಸುತ್ತಾರೆ ಎಂಬುದನ್ನು ತಿಳಿಯಬಹುದು. ಇದರ ಜೊತೆಗೆ ಮೌಢ್ಯತೆಗೆ ಒಳಗಾಗಿ ದೇವರ ಹೆಸರಿನಲ್ಲಿ ಹೆಣ್ಣನ್ನು ಯಾವ ರೀತಿ ಸೂಳೆಗಾರಿಕೆಗೆ ಇಳಿಸುತ್ತಾರೆ ಎಂಬುದು 'ಬದುಕು' ಕಾದಂಬರಿಯ ಚಿತ್ರಣವಾಗಿದೆ.

ದಲಿತ ಹೆಣ್ಣು ಮಗಳೊಬ್ಬಳ ಜೀವನದ ಸುತ್ತ ಹೆಣೆದ ಮತ್ತೊಂದು ಕಾದಂಬರಿ 'ದಂಗೆ'. ಪ್ರೀತಿ ವ್ಹಾತ್ಸಲ್ಯವೇ ಸಿಗದೆ ಸಂಕಟ ಸಮಸ್ಯೆಗಳೇ ಬದುಕಿನ ಅವಿಭಾಜ್ಯ ಅಂಗವಾಗಿ

ಬೆಳೆದ ಕಥಾನಾಯಕಿಯೇ ದುರ್ಗಿ. ತನ್ನವರು ಅಂದುಕೊಳ್ಳುತ್ತಿರುವಾಗಲೇ ತನ್ನವರಿಂದಲೇ ಮೋಸದ ಮಜಲುಗಳಿಗೆ ಒಳಗಾಗುವ ಹೆಣ್ಣೇ ದುರುಗಿ.

ಹುಟ್ಟು ತಬ್ಬಲಿಯಾದ ದುರುಗಿಯ ಬದುಕೇನು ಸುಖದ ಸುಪ್ಪತ್ತಿಗೆಯಾಗಿರಲಿಲ್ಲ. ದಾಟಿ ಬಂದ ದಾರಿಯೇನೂ ಹೂವಿನ ಹಾಸಿಗೆಯಾಗಿರಲಿಲ್ಲ. ಬದುಕು ಸವೆಸಿದ ಹಳ್ಳಿಗಳೇನೂ ಇವಳನ್ನು ಗರತಿ ಗಂಗಮ್ಮನೆಂದು ಸಾಬೀತುಗೊಳಿಸಿರಲಿಲ್ಲ.[೫] ಹೆತ್ತವರು ಸತ್ತು ಅನಾಥಳಾಗಿದ್ದ ಸಂದರ್ಭದಲ್ಲಿ ಮಲ ಅಕ್ಕನ ಮನೆಯಲ್ಲಿ ಕೆಲಸ ಮಾಡುತ್ತಾ ಬೆಳೆದಿದ್ದಳು. ಚಂದನದ ಗೊಂಬೆಯ ಹಾಗೆ ಇದ್ದ ಇವಳ ಬದುಕಿನ ಬಿಳಿಯ ಪುಸ್ತಕದ ಮೇಲೆ ಮೊದಲನೇ ಪುಟದಲ್ಲಿಯೇ ಕರಿಯ ಮಸಿಯನ್ನು ಎರಚಿದವನು ಭಾವ ಹಣಮಂತ. ಅವಳನ್ನು ಬಲವಂತವಾಗಿ ಅನುಭವಿಸಿದ್ದ. ಅವಳ ಇಚ್ಚೆಗೆ ವಿರುದ್ಧವಾಗಿ ಹಿಡಿತ ತಪ್ಪಿ ಬಾಳು ಹೊಲಸಾಗಿತ್ತು. ಮುಂದೆ ಕೈ ಹಿಡಿದ ಮಾಳಪ್ಪನಿಂದ ದೈಹಿಕ ಸುಖ ಮಾತ್ರ ಸಿಗುತ್ತಿತ್ತು ನೆಮ್ಮದಿ ದೂರವಾಗಿತ್ತು. ಮೈಗಳ್ಳನಾಗಿದ್ದ ಗಂಡ ಸಂಪಾದನೆಯನ್ನು ಮಾಡುತ್ತಿರಲಿಲ್ಲ. ಆಗಲೂ ತಾನೇ ದುಡಿದು ಸಂಸಾರ ನಿಭಾಯಿಸಿ ಗಂಡನನ್ನೂ ಸಾಕುತ್ತಿದ್ದರು ಇವಳನ್ನು ಬಿಟ್ಟು ಸನ್ಯಾಸಿಗಳ ಹಿಂದೆ ದೇಶಾಂತರ ಓಡಿ ಹೋಗುವುದನ್ನು ಕಾಣುತ್ತೇವೆ.

ಒಂದು ಹೆಣ್ಣು ಮಗುವಿನ ತಾಯಿ ಮನೆಯಲ್ಲಿ ಯಾರು ಇಲ್ಲದ ರಾತ್ರಿಯ ಸಮಯದಲ್ಲಿ ಇವಳನ್ನು ಅನುಭವಿಸಲು ಕಾಮುಕ ಸಾಮ್ರಾಜ್ಯವೇ ಕಾಯುತ್ತದೆ. ಬದುಕು ಸಾಗಿಸಲು ಊರು ಬಿಟ್ಟು ಪರ ಊರಿಗೆ ಬಂದಳು ಇಲ್ಲೂ ಅದೇ ರೀತಿಯ ಜನ. ಗೌಡ, ಪಾಟೀಲ, ಈರಣ್ಣ ಮುಂತಾದವರು ಇವಳ ಮೇಲಿನ ದೇಹದ ಪ್ರೀತಿಗಾಗಿ ಹಾತೊರೆಯುತ್ತಿದ್ದರು. ಮದುವೆಗೆ ಮೊದಲು ಜಾತ್ರೆಯಲ್ಲಿ ನೋಡಿದ್ದ ಕುಕ್ಕಣೀ ಗೋವಿಂದಪ್ಪ ಮತ್ತೆ ತನ್ನ ಜೀವನದಲ್ಲಿ ಬಂದಾಗ ಅವನ ಜೊತೆ ದೇಹ-ಮನಸ್ಸುಗಳನ್ನು ಹಂಚಿಕೊಳ್ಳುತ್ತಾಳೆ. ಗಂಡು ದಿಕ್ಕಿಲ್ಲದ ಮನೆಯಲ್ಲಿ ಕುಕ್ಕಿ ತಿನ್ನುವ ಹದ್ದುಗಳೇ ಹೆಚ್ಚೆಂದು ತನ್ನ ಮಗಳು ಸಾತಿಯ ಭವಿಷ್ಯತ್ತಿನ ದೃಷ್ಟಿಯಿಂದ ವಿಧಿಯಿಲ್ಲದೆ ಬೇರೊಂದು ಗಂಡಸಿನ ತೆಕ್ಕೆಗೆ ಬೀಳುತ್ತಾಳೆ.

ಕುಕ್ಕಣಿ ಗೋವಿಂದಪ್ಪ ದುರ್ಗಿಯ ಮನಸ್ಸಿಗೆ ಸೋತು, ಆಕೆಯನ್ನು ತನ್ನ ತೋಟದ ಮನೆಯಲ್ಲಿ ರಾಣಿಯ ಹಾಗೆ ಇಟ್ಟುಕೊಳ್ಳುತ್ತಾನೆ. ಹೆಂಡತಿಯಲ್ಲದ ಹೆಂಡತಿಯಾಗಿ ಬಾಳ್ವೆಯನ್ನು ನಡೆಸುತ್ತಾರೆ. ಗೋವಿಂದಪ್ಪನ ಮಗನೂ ದುರುಗಿಯ ಮಗಳು ಒಟ್ಟಾಗಿ ವಿದ್ಯಾಭ್ಯಾಸ ಮಾಡುತ್ತಾ ಬೆಳೆದು ದೊಡ್ಡವರಾದ ಮೇಲೆ ಪ್ರೀತಿಸಿ ವಿವಾಹವಾಗುವ ಹಂತಕ್ಕೆ ಬರುತ್ತಾರೆ. ಇಂತಹ ಸಂದರ್ಭದಲ್ಲಿ ಜಾತಿಯ ಪ್ರಜ್ಞೆ ಎದ್ದಾಗ ಕುಕ್ಕಣಿ ತಾನು ಪ್ರೀತಿಸಿದ ದುರುಗಿಯನ್ನು ಅವಳ ಮಗಳನ್ನು ಕೊಲ್ಲುವ ಸಂಚನ್ನು ರೂಪಿಸುತ್ತಾನೆ.

ಜೀವನದ ಉದ್ದಕ್ಕೂ ತನ್ನ ಬದುಕನ್ನು ಕಲ್ಲುಮುಳ್ಳುಗಳ ನಡುವೆಯ ನಡೆಸಿಕೊಂಡು ಬಂದಿದ್ದ ದುರ್ಗಿಗೆ ಗೋವಿಂದಪ್ಪನಿಂದ ಒಂದು ನೆಲೆ ಸಿಕ್ಕಿತು ಅಂದುಕೊಳ್ಳತ್ತಿರುವಾಗಲೇ

---

೫. ಗೀತಾ ನಾಗಭೂಷಣ್ : ದಂಗೆ : ಪುಟ ಸಂಖ್ಯೆ-೦೭: ಕನ್ನಡ ಸಾಹಿತ್ಯ ಪರಿಷತ್ತು : ೨೦೧೨

ಸಂಚಿನ ಸುಳಿವು ಸಿಗುತ್ತದೆ. ಮಗಳ ಭವಿಷ್ಯತ್ತಿನ ದೃಷ್ಟಿಯಿಂದ ತನ್ನನ್ನು ಗೋವಿಂದಪ್ಪನಿಗೆ ಒಪ್ಪಿಸಿಕೊಂಡಿದ್ದಳು. ತಾನು ಪ್ರೀತಿಸಿದವನ ಮತ್ತು ತನ್ನನ್ನು ಪ್ರೀತಿಸಿದವರ ವಿರುದ್ಧ 'ದಂಗೆ' ಏಳುತ್ತಾಳೆ. ತನ್ನ ಪ್ರಿಯಕರನಿಗೆ ತಾನೇ ಮೃತ್ಯುವಾಗಿ ನಿಂತು ಅವನನ್ನು ಕೊಲ್ಲುತ್ತಾಳೆ.

ಈ ಕಾದಂಬರಿಯಲ್ಲಿ ಬರುವ ಮತ್ತೊಂದು ಪಾತ್ರವೆಂದರೆ ಕಾಶವ್ವ. ಪ್ರತಿಭಟಿಸಿ ಹೋರಾಡುವ ಧೈರ್ಯವಿಲ್ಲದೆ ಮೂಕ ವೇದನೆಯಲ್ಲಿಯೇ ಸಾಯುವ ಪಾತ್ರ ಕಾಶವ್ವ. ತಾನು ಬಸುರಿಯಾಗಿದ್ದ ಸಮಯದಲ್ಲಿ ಹಾವು ಕಚ್ಚಿ ಗಂಡ ಪರಶುರಾಮ ಸಾಯುತ್ತಾನೆ. ಅಪ್ಪ-ಅಮ್ಮ ಇಲ್ಲದ ತಬ್ಬಲಿ ಗಂಡನನ್ನು ಕಳೆದುಕೊಂಡು ಅದೇ ಮನೆಯಲ್ಲಿ ಇರುತ್ತಾಳೆ. ಮಗಳ ಸಮಾನಳಾದ ಸೊಸೆಯನ್ನು ಕಾಶವ್ವನ ಮಾವ ದ್ಯಾವ ಪ್ರತಿದಿನ ಅತ್ಯಾಚಾರ ಮಾಡುತ್ತಾನೆ. ಗಂಡ ಸತ್ತ ಒಂದೇ ವರ್ಷಕ್ಕೆ ಮತ್ತೆ ಬಸುರಿಯಾದ ಇವಳು ತನ್ನ ನೋವನ್ನು ಬೇರೆಯವರ ಬಳಿಯೂ ಹೇಳಿಕೊಳ್ಳಲಾಗದೇ ಬಾವಿಯಲ್ಲಿ ಬಿದ್ದು ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ.

ದಮನಕ್ಕೆ ಒಳಗಾದ ದಲಿತ ಸ್ತ್ರೀ ನೋವುಗಳು, ದೌರ್ಜನ್ಯಗಳು, ಜಾತಿಯ ಹೆಸರಿನ ಶೋಷಣೆಗಳನ್ನು ಮನಮಿಡಿಯುವ ಹಾಗೇ ದಂಗೆ ಕಾದಂಬರಿಯಲ್ಲಿ ತೋರಿಸಿದ್ದಾರೆ.

ದಲಿತ ಮಹಿಳೆಯರ ಬಗ್ಗೆ ಹೆಚ್ಚಿನ ಕಾಳಜಿ ಇದ್ದ ಗೀತಾ ನಾಗಭೂಷಣ್‌ರವರು 'ಕಾಗೆ ಮುಟ್ಟಿತು' ಕಾದಂಬರಿಯನ್ನು ಬರೆದರು. ಇದರಲ್ಲಿ ಹೆಣ್ಣು ಮದುವೆ ಆಗಿ ಅನುಭವಿಸುವ ಯಾತನೆಗಳು, ನೆಮ್ಮದಿಗಿಂತ ಅಶಾಂತಿ ಹೆಚ್ಚಾಗಿ ಇರುವುದನ್ನು ಕಾಣಬಹುದು. ಊಳಿಗಮಾನ್ಯ ಪದ್ಧತಿಯಿಂದ ಜಮೀನುದಾರರ ಕ್ರೌರ್ಯವು ಜೀತದಾಳುಗಳನ್ನು ಯಾವ ರೀತಿ ವೇದನೆಗೆ ಒಳಪಡಿಸುತ್ತದೆ ಎಂಬುದನ್ನು ಬಿತ್ತರಿಸುತ್ತದೆ.

ಬಾಳ್ಯಾ ಮತ್ತು ಆತನ ಹೆಂಡತಿ ಸೋನಿ ತಮ್ಮ ಊರಿನಲ್ಲಿ ಭೂಕಂಪ ಉಂಟಾದಾಗ ಎಲ್ಲವನ್ನು ಕಳೆದುಕೊಂಡು ನಿರ್ಗತಿಕರಾದವರು. ಶಿವಳ್ಳಿಗೆ ಬಂದು ಉಗ್ರಪ್ಪಗೌಡನ ಮನೆಯ ಜೀತದ ಆಳುಗಳಾಗಿ ನೆಲೆ ನಿಲ್ಲುತ್ತಾರೆ. ಕಾಮುಕನಾದ ಉಗ್ರಪ್ಪಗೌಡ ಬಾಳ್ಯಾನ ಹೆಂಡತಿಯಾದ ಸೋನಿಯಾಳನ್ನು ಬಲವಂತದಿಂದ ಅನುಭವಿಸುತ್ತಾನೆ.

ಇದೇ ಕಾದಂಬರಿಯಲ್ಲಿ ದಲಿತರ ಬದುಕಿನ ಸ್ವರೂಪವನ್ನು ಹಾಗೂ ಪುರುಷರ ಶೋಷಣೆಯನ್ನು ಬಿತ್ತರಿಸುತ್ತದೆ. ದಲಿತರ ಮೂಕ್ಯಾನು ಕುಕ್ಕಣಿಯ ಬಳಿ ಸಾಲವನ್ನು ಪಡೆದಿರುತ್ತಾನೆ. ಅದನ್ನು ತೀರಿಸಲು ಹವಣಿಸುತ್ತಿರುವಾಗ ಕುಕ್ಕಣ್ಣಿಯ ಕಿರುಕುಳಕ್ಕೆ ಒಳಗಾಗಿ ಹೆಂಡತಿಯನ್ನು ಅಡವಿಡುತ್ತಾನೆ. ತಾನು ದುಡಿದು ಹಣವನ್ನುಗಳಿಸಿ ಸಾಲವನ್ನು ತೀರಿಸಬೇಕು ಹೆಂಡತಿಯನ್ನು ಬಿಡಿಸಿಕೊಳ್ಳಬೇಕು ಎಂದು ಹಗಲು ರಾತ್ರಿ ಕಷ್ಟ ಪಡುತ್ತಾನೆ. ತಾನು ಸಂಪಾದನೆ ಮಾಡುವಷ್ಟರಲ್ಲಿಯೇ ಕುಲಕರ್ಣಿ ಮೂಕ್ಯಾನ ಹೆಂಡತಿ ಚೆನ್ನಿಯನ್ನು ತನ್ನ ದೈಹಿಕ

ಸುಖಕ್ಕೆ ಪ್ರತಿದಿನ ಬಳಸಿಕೊಳ್ಳುತ್ತಿರುತ್ತಾನೆ. ಇದನ್ನು ಪ್ರಶ್ನಿಸಲಾಗದ ಚೆನ್ನಿ ಮೂಕ ರೋದನೆಯಲ್ಲಿ ಬಳಲುತ್ತಾಳೆ. ಚೆನ್ನಿ ಬಸುರಿಯಾದಾಗ ಹೆಂಡತಿಯ ಸ್ಥಿತಿಯನ್ನು ಕಂಡು ಮೂಕ್ಯಾ ಊರಿನ ಹಿರಿಯರಿಗೆಲ್ಲ ತಿಳಿಸಿ ನ್ಯಾಯವನ್ನು ಪಡೆಯಲು ಊರಿನಲ್ಲಿ ಪಂಚಾಯಿತಿಯನ್ನು ಸೇರಿಸುತ್ತಾನೆ. ಜಮೀನ್ದಾರಿ ಪದ್ಧತಿಯಲ್ಲಿ ಹಣವುಳ್ಳವರಿಗೆ ಹೆಚ್ಚು ಬಲ "ಬಡವನ ಕೋಪ ದವಡೆಗೆ ಮೂಲ" ವೆಂಬಂತೆ ನ್ಯಾಯ ತೀರ್ಮಾನದಲ್ಲಿ ಬಸುರಿ ಮಾಡಿದವನೇ ಅವಳನ್ನು ಸಾಕಬೇಕು ಎಂದು ತೀರ್ಮಾನ ನೀಡುತ್ತಾರೆ. ದಲಿತರು, ಬಡಜನರ ಮೇಲೆ ಶ್ರೀಮಂತ ವರ್ಗದವರು ಯಾವ ರೀತಿ ಶೋಷಣೆಗೊಳಪಡಿಸಿ ಸರ್ವಾಧಿಕಾರಿ ಧೋರಣೆಯನ್ನು ತಾಳುತ್ತಾರೆ ಎಂಬುದರ ಚಿತ್ರಣವನ್ನು ಇಲ್ಲಿ ಕಾಣಬಹುದು.

ದಲಿತ ಮಹಿಳೆಯರ ಶೋಷಣೆಯ ಕರಾಳ ಮುಖವನ್ನು ಬಿಂಬಿಸುವ ಮತ್ತೊಂದು ಕಾದಂಬರಿ 'ಮಾಪುರ ತಾಯಿಯ ಮಕ್ಕಳು'. ಜೋಗತಿ ಸಂಪ್ರದಾಯದಂಥ ಕೆಡುಕನ್ನು ಧೈರ್ಯವಾಗಿ ವಾಸ್ತವಿಕ ನೆಲೆಗಟ್ಟಿನಲ್ಲಿ ಚಿತ್ರಿಸಿದ ಕೃತಿ. ಹೆಣ್ಣನ್ನು ಮಮತಾಮಯಿ, ದಯಾಮಯಿ, ತ್ಯಾಗಮೂರ್ತಿ, ಕಷ್ಟಸಹಿಷ್ಣು, ತಾಯಿ, ದೇವಿ, ಭೂಮಿ ಎಂದೆಲ್ಲಾ ಹೊಗಳುವ ಸ್ತ್ರೀಯನ್ನು ಸೂಳೆಗಾರಿಕೆಗೆ ಇಳಿಸುವ ದುಷ್ಟ ಸಂಪ್ರದಾಯದ ಬಗೆಗೆ ವಸ್ತುನಿಷ್ಠ ವರದಿಯನ್ನು ಈ ಕಾದಂಬರಿ ನೀಡುತ್ತದೆ[೬].

ಹೊಲೆಯರ ಚಂದ್ರಪ್ಪನ ಮಗಳು ಸಿಂಗಾರಿ ಮೌಢ್ಯತೆಗೆ ಬಲಿಯಾಗಿ ಸೂಳೆಗಾರಿಕೆಗೆ ಇಳಿಯುವ ಹೆಣ್ಣು. ತನ್ನ ಬದುಕಿನಲ್ಲಿ ಆಶಾಗೋಪುರವನ್ನೇ ನಿರ್ಮಿಸಿಕೊಂಡಿದ್ದ ಈಕೆ ತನ್ನ ಮಾವನ ಮಗನಾದ ಶಿವರುದ್ರನನ್ನು ಪ್ರೀತಿಸುತ್ತಾಳೆ. ಇಂತಹ ನಿಷ್ಕಲ್ಮಶ ಪ್ರೀತಿ ಸಮಾಜದ ಕಣ್ಣಿಗೆ ಕಾಣುವುದೇ ಇಲ್ಲ. ಹಿಂದಿನಿಂದಲೂ ಚಾಲ್ತಿಯಲ್ಲಿದ್ದ ಸಂಪ್ರದಾಯವನ್ನು ಪಾಲಿಸಬೇಕೆಂಬ ಅಪ್ಪ ಅಮ್ಮನ ಮೂಢ ನಂಬಿಕೆಗೆ ಒಳಗಾಗಿ ಸಿಂಗಾರಿ ಜೋಗತಿಯಾಗುತ್ತಾಳೆ. ಊರಿನವರೆಲ್ಲರ ಕಾಮದಾಹವನ್ನು ತೀರಿಸುವ ವಸ್ತುವಾಗುತ್ತಾಳೆ. ಈ ರೀತಿಯಾಗಿ ಅರಳಬೇಕಾದ ಕುಸುಮ ಪರಿಸ್ಥಿತಿಗಳಿಂದ ಮುದುಡುತ್ತದೆ.

ಹಸಿ ಹಸಿ ಪ್ರೀತಿ ಪ್ರೇಮ ಪ್ರಣಯಗಳ ಬಗ್ಗೆ, ಹೆಣ್ಣಿನ ಶೋಷಣೆಯ ವಿವಿಧ ಮುಖಗಳ ಬಗ್ಗೆ ತಮ್ಮ ಸಾಹಿತ್ಯದಲ್ಲಿ ತಂದಿರುವ ಗೀತಾ ನಾಗಭೂಷಣ್‌ರವರು, ಕನ್ನಡ ಸಾರಸ್ವತ ಲೋಕಕ್ಕೆ ಕೊಟ್ಟಿರುವುದು ಅಪಾರ. ಇವರ ಕೃತಿಗಳು ಸಾಹಿತ್ಯದ ಆಕಾಶದಲ್ಲಿ ಪ್ರಜ್ವಲಿಸುವ ತಾರಾ ಪುಂಜಗಳಾಗಿವೆ. ಲೈಂಗಿಕ ಶೋಷಣೆ, ದೇವಿಯ ಹರಕೆಯ ಹೆಸರಿನಲ್ಲಿ ನಡೆಸುತ್ತಿರುವ ಶೋಷಣೆಗಳನ್ನು ತಮ್ಮ ಸಾಹಿತ್ಯದಲ್ಲಿ ತಂದಿದ್ದಾರೆ. ಲೈಂಗಿಕ ದೌರ್ಜನ್ಯಕ್ಕೆ ಒಳಗಾಗುವುದು ಇಲ್ಲವೆ ಹೆಣ್ಣಿನ ಲೈಂಗಿಕತೆಯ ಸ್ವೀಕರಣ–ನಿರಾಕರಣದ ಬಗ್ಗೆಯೇ ಇವರ ಕಾದಂಬರಿಗಳು ಸುತ್ತುತ್ತವೆ.

---

೬. ಎಲ್.ವಿ. ಶಾಂತಕುಮಾರಿ : ಗೀತಾಭೂಷಣ್ : ಪುಟ ಸಂಖ್ಯೆ–೧೮ : ಸ್ವಪ್ನ ಬುಕ್ ಹೌಸ್–೨೦೧೧.

# ಅಧ್ಯಾಯ–೬

## ಬದುಕು ಕಾದಂಬರಿಯಲ್ಲಿ ಚಿತ್ರಿತವಾಗಿರುವ ಸ್ತ್ರೀ

೧. ಸಾಮಾಜಿಕ ಚಿತ್ರಣ

೨. ಮೂಢನಂಬಿಕೆಗಳ ಸೆಳೆತದಲ್ಲಿ

೩. ಸಾಂಸಾರಿಕ ಸೆಳೆತದಲ್ಲಿ

# ಅಧ್ಯಾಯ-೬

## ಬದುಕು ಕಾದಂಬರಿಯಲ್ಲಿ ಚಿತ್ರಿತವಾಗಿರುವ ಸ್ತ್ರೀ

ಬದಲಾವಣೆಯು ಬದುಕಲ್ಲಿ ಬಂದು ಹೋಗುವ ಪ್ರಕ್ರಿಯೆ. ಯಾವುದೂ ಪ್ರಸ್ತುತವಲ್ಲ. ಪ್ರಸ್ತುತವೆಂಬುದು ಜ್ವಲಿಸುತ್ತಿರುವ ಬೆಂಕಿಯಂತೆ. ಎಲ್ಲಾ ಕಾಲಕ್ಕೆ ಎಲ್ಲಾ ವಿಷಯಗಳು ಪ್ರಸ್ತುತವಾಗಲಾರವು. ಏಕೆಂದರೆ ಅದು ಕೆಲವಾರು ಹಂತಗಳನ್ನು ದಾಟಿಕೊಂಡು ಬಂದಿರುತ್ತದೆ. ಅನಾದಿ ಕಾಲದಲ್ಲಿ ಮಾನವನಿಗೆ ಬಟ್ಟೆಯನ್ನು ತೊಟ್ಟುಕೊಳ್ಳುವ ಪರಿಚಯವಿರಲಿಲ್ಲ. ತದನಂತರ ಮರದ ತೊಗಟೆಯನ್ನು ಸುತ್ತಿಕೊಂಡ ಅವನು ಬಟ್ಟೆ ನೇಯ್ದು ಹಾಕಿಕೊಳ್ಳುವ ಹಂತಕ್ಕೆ ತಲುಪಿದನು. ಈ ರೀತಿಯಲ್ಲಿ ಯಾವುದೂ ಪ್ರಸ್ತುತವಲ್ಲವೆಂಬದು ಸ್ಪಷ್ಟವಾಗುತ್ತದೆ.

ಬದುಕೆಂಬುದು ಜಡವಸ್ತುವಲ್ಲ. ಹರಿಯುವ ನದಿಯಂತೆ ಸದಾ ಚಲನಶೀಲವಾದ ಬದುಕಿನಲ್ಲಿ ಕಾಲಕಾಲಕ್ಕೆ ಮೌಲ್ಯಗಳು, ನಂಬಿಕೆಗಳು, ಸಂಪ್ರದಾಯಗಳು ಬದಲಾದರೂ ಒಂದು ಮಾತ್ರ ಬದಲಾಗಿಲ್ಲ. ಶತಮಾನಗಳಿಂದ ಪಿತೃಪ್ರಧಾನ ಕುಟುಂಬ ವ್ಯವಸ್ಥೆಯನ್ನು ಒಪ್ಪಿಕೊಂಡ ಭಾರತೀಯ ಸಮಾಜವು ಹೆಣ್ಣನ್ನು ಎರಡನೇ ದರ್ಜೆಯ ಪ್ರಜೆಯಾಗಿಯೇ ಕಂಡಿರುವುದು. ಇತಿಹಾಸದುದ್ದಕ್ಕೂ ನಡೆಯುತ್ತಾ ಬಂದ ಈ ಶೋಷಣೆಗೆ ಪ್ರತಿಕ್ರಿಯೆ ಪ್ರತಿಭಟನೆ ಈ ಶತಮಾನದಲ್ಲಿ ವ್ಯಕ್ತವಾದಷ್ಟು ತೀವ್ರವಾಗಿ ಹಿಂದೆಂದೂ ಈ ರೀತಿಯಾಗಿ ಹರಳುಗಟ್ಟಿರಲಿಲ್ಲ.[೧] ಆದರೂ ಸಹ ಬಂಡಾಯದ ಕಾಲಕ್ಕೂ ಬಂಡೆಯಂತೆಯೇ ಹಾಗೇಯೇ ಉಳಿದು ನಿಂತಿರುವುದು ಅತ್ಯಂತ ಖೇದದ ಸಂಗತಿಯಾಗಿದೆ.

ನಾಗರೀಕತೆಯ ಪೂರ್ವದಲ್ಲಿ ಕೂಡ ಮಾನವನು ಒಬ್ಬಂಟಿಯಾಗಿರದ ಕಾಲದಲ್ಲೂ ಹೆಣ್ಣು ಗುಂಪಿನ ನಾಯಕಿಯಾಗಿದ್ದಳು. ತದನಂತರ ಬದಲಾವಣೆಗಳಿಗೆ ಒಳಪಟ್ಟು ಅಧಿಕಾರವನ್ನು ಗಂಡು ತನ್ನತ್ತ ಸೆಳೆದುಕೊಂಡನು.

ದೇವರು, ಧರ್ಮ, ಜಾತಿ, ಮೂಢನಂಬಿಕೆ, ಹೆಣ್ಣಿನ ಮೇಲಿನ ದಬ್ಬಾಳಿಕೆ ಇವೆಲ್ಲವು ಹೆಚ್ಚಾಗುತ್ತಾ ಬಂದು ಹೆಣ್ಣು ಮೂಲೆಗುಂಪಾದಳು. ಇವುಗಳ ಜೊತೆಯಲ್ಲಿ 'ಸೃಷ್ಟಿಯ ವಿಸ್ಮಯಗಳಲ್ಲಿ ಹೆಣ್ಣು' ಒಂದಾಗಿ ಪುರುಷನಿಗೆ ಕಂಡಳು. ಕುತೂಹಲದಿಂದಲೇ ನೋಡುತ್ತಾ ಬಂದ ಪುರುಷನಿಗೆ ಮಹಿಳೆ ಭೋಗದ ವಸ್ತುವಾಗಿ ಕಂಡಿದ್ದು ಎಲ್ಲರಿಗೂ ಗೊತ್ತಿರುವ ಸಂಗತಿಯೇ ಸರಿ.

ಲಿಂಗಭೇದದ ಆಧಾರದ ಮೇಲೆ ಏರ್ಪಟ್ಟಿರುವ ಸ್ತ್ರೀ-ಪುರುಷರ ನಡುವಿನ ಅಸಮಾನತೆ, ಮನುಷ್ಯ-ಮನುಷ್ಯರ ನಡುವೆ ಇದ್ದಂತಹ ಸಹಜವಾದ ಸುಮಧುರ

---

೧. ಎಸ್.ವಿ.ಪ್ರಭಾವತಿ: ಸ್ತ್ರೀವಾದದ ಪ್ರಸ್ತುತತೆ: ಪುಟಸಂಖ್ಯೆ-೧೧: ಭಾರತೀಯ ಸಂಸ್ಕೃತಿ ವಿದ್ಯಾಪೀಠ: ೨೦೦೦

ಬಾಂಧವ್ಯಗಳು ಹಾಳಾಗುತ್ತಾ ಬಂದು ಉಚ್ಛ್ರಾಯ ಸ್ಥಿತಿಯನ್ನು ತಲುಪಿವೆ. ಸಾಮಾಜಿಕ ಹಾಗು ಸಾಂಸ್ಕೃತಿಕ ನೆಲೆಯಲ್ಲಿ ಈ ರೀತಿಯಾದಂತಹ ಅಸಮಾನತೆಯನ್ನು ಹೋಗಲಾಡಿಸಬೇಕಾದ ಅನಿವಾರ್ಯತೆ ಇದ್ದು ಅದು ಅತ್ಯಂತ ಜರೂರಾಗಿ ಆಗಬೇಕಾಗಿದೆ. ಸಾಮಾಜಿಕ ಪಿಡುಗುಗಳಾದ ವರದಕ್ಷಿಣೆ, ಬಾಲ್ಯವಿವಾಹ, ಬಹುಪತ್ನಿತ್ವ, ದೇವದಾಸಿ ಪದ್ದತಿ ಮುಂತಾದ ಹಲವಾರು ಅನಿಷ್ಟ ಪದ್ಧತಿಗಳಲ್ಲಿ ಸಿಲುಕಿ ನರಳುತ್ತಿದ್ದಾಳೆ. ಇಂತಹ ಅಮಾನವೀಯ ಆಚರಣೆಗಳಿಂದ ಸ್ತ್ರೀಯರ ಸ್ಥಿತಿಗತಿಗಳು ಅಧೋಗತಿಗೆ ಇಳಿಯುತ್ತಿವೆ.

ಸಮಾಜದಲ್ಲಿ ದಿನದಿಂದ ದಿನಕ್ಕೆ ಈ ರೀತಿಯಾದಂತಹ ಸಾಮಾಜಿಕ ಸಮಸ್ಯೆಗಳು ಬೆಳೆಯುತ್ತಾ ಹೋಗುತ್ತಿದ್ದು ಇಂತಹ ಸಮಸ್ಯೆಗಳನ್ನು ಮೆಟ್ಟಿ ನಿಲ್ಲಲು ಸ್ತ್ರೀಯರಿಗೆ ತಿಳುವಳಿಕೆ ಮತ್ತು ಮಾನಸಿಕ ಸ್ಥೈರ್ಯವನ್ನು ತುಂಬಬೇಕಾಗಿದೆ. ಕಾನೂನುಗಳನ್ನು ರೂಪಿಸಿದರೆ ಮಾತ್ರ ಸಾಲದು ಅವುಗಳನ್ನು ಅನುಷ್ಠಾನಕ್ಕೆ ತರಬೇಕಾಗಿದೆ.

ಶತಶತಮಾನಗಳಿಂದ ಗಂಡು ಹೆಣ್ಣು ಕೂಡಿ ಬದುಕಿದರು. ಆದರೆ ಅವರಿಬ್ಬರಿಗೂ ಒಂದು ಸಾಮಾನ್ಯ ಪ್ರಪಂಚವಿದ್ದಂತೆ ಹೆಣ್ಣಿಗೆ ಅವಳದೇ ಆದ ಭೌತಿಕ, ಮಾನಸಿಕ ಪ್ರಪಂಚ ಉಳಿಯಿತು. ಈ ಹಿನ್ನೆಲೆಯಲ್ಲಿ ಮಹಿಳೆಯ ಸ್ಪಂದನೆಯ, ಗ್ರಹಿಕೆಯ ಸ್ವೀಕಾರದ ಲಯ, ಗತಿ, ತೀವ್ರತೆಗಳು ಭಿನ್ನವಾದವು. ಈ ಭಿನ್ನತೆ ಬದುಕನ್ನು ನೋಡುವ ಅವಳ ದೃಷ್ಟಿಕೋನಕ್ಕೂ ಒಂದು ವಿಶಿಷ್ಟತೆಯನ್ನು ತಂದುಕೊಟ್ಟಿದೆ.[೨]

ಸಾಹಿತ್ಯ ಕೃತಿಯೊಂದು ಕೇವಲ ಚಾರಿತ್ರಿಕ ಉತ್ಪಾದನೆ ಮಾತ್ರವಲ್ಲ. ತಾನು ರೂಪು ತಳೆಯುತ್ತಲೇ ಸಾಂಸ್ಕೃತಿಕ ರೂಪವೊಂದು ಚರಿತ್ರೆಯನ್ನು, ಸಂಸ್ಕೃತಿಯನ್ನು ಮರು ನಿರೂಪಿಸುತ್ತಿರುತ್ತದೆ. ಈ ನೆಲೆಯಲ್ಲಿ, ಮಹಿಳಾ ಬರಹವು ಸಮಾಜವನ್ನು, ಸಂಸ್ಕೃತಿಯನ್ನು ಗುರುತಿಸುವ ಕೆಲಸವನ್ನು ಮಾಡುತ್ತದೆ.

ಗೀತಾನಾಗಭೂಷಣ್‌ರವರ ಕಾದಂಬರಿಗಳು ಇಂತಹ ಕೆಲಸವನ್ನು ಮಾಡುತ್ತಿರುವುದನ್ನು ಕಾಣಬಹುದಾಗಿದೆ. ಬದುಕು ಕಾದಂಬರಿಯು ಹೆಣ್ಣಿನ ಸಾಮಾಜಿಕ ಅಸಮಾನತೆ, ಲಿಂಗ ಅಸಮಾನತೆ, ಜಾತಿಯಾಧಾರಿತ ಶೋಷಣೆಯ ಜೊತೆಜೊತೆಗೆ, ಮೂಢ ನಂಬಿಕೆಯ ಹೆಸರಿನಲ್ಲಿ ಶೋಷಣೆ. ಹೀಗೆ ಶೋಷಣೆಯ ವಿವಿಧ ಆಯಾಮಗಳನ್ನು ಗುರುತಿಸಬಹುದಾಗಿದೆ. ಹೆಣ್ಣನ್ನು ಇಚಿದು ಮುಖ್ಯ ಘಟಕವಾಗಿ ತೆಗೆದುಕೊಂಡು ಅವಳ ವೈಯಕ್ತಿಕ ಬದುಕಿನಲ್ಲಿ ನಡೆಯುತ್ತಿರುವಚಿತಹ ಸಾಮಾಜಿಕ, ರಾಜಕೀಯ, ಆರ್ಥಿಕ ವೈಪರಿತ್ಯಗಳನ್ನು ಸಾಹಿತ್ಯ ಮಾಧ್ಯಮದ ಮೂಲಕ ಅತ್ಯಂತ ಮಾರ್ಮಿಕವಾದ ರೀತಿಯಲ್ಲಿ ಚಿತ್ರಿಸಿರುವುದನ್ನು ಕಾಣಬಹುದು.

---

೨. ಡಾ॥ ಗಾಯತ್ರಿ ನಾವಡ: ಕರಾವಳಿ ಜನಪದ ಸಾಹಿತ್ಯದಲ್ಲಿ ಸ್ತ್ರೀವಾದ ನೆಲೆಗಳು ಪುಟಸಂಖ್ಯೆ:೧೫೬. ಸಿರಿ ಪ್ರಕಾಶನ ೧೯೯೯

ಸ್ತ್ರೀಯರ ಬದುಕಿನ ಶೋಧನೆಯನ್ನು ಮಾಡಲು ಹೊರಟಿರುವುದೇ ಬದುಕು. ಈ ಶೋಧ ಕಾರ್ಯದಲ್ಲಿ 'ಬದುಕು' ಸಿಕ್ಕೇ ಸಿಗುವುದೆಂಬ ನಂಬಿಕೆ ಏನು ಇಲ್ಲ. ಅವರ ಬದುಕಿನ ಸಂವೇದನೆಗಳನ್ನು 'ಬದುಕು' ಕಾದಂಬರಿಯಲ್ಲಿ ಈ ಅಂಶಗಳನ್ನು ಮೂಲ ಭಿತ್ತಿಯನ್ನಾಗಿಟ್ಟುಕೊಂಡು ನೋಡಬಹುದು.

ಅ) ಸಾಮಾಜಿಕ ಚಿತ್ರಣ

ಆ) ಮೂಢನಂಬಿಕೆಗಳ ಸೆಳೆತದಲ್ಲಿ

ಇ) ಸಾಂಸಾರಿಕ ಸೆಳೆತದಲ್ಲಿ.

**ಸಾಮಾಜಿಕ ಚಿತ್ರಣ:**

ಗೀತಾನಾಗಭೂಷಣರು ತಮ್ಮ 'ಬದುಕು' ಕಾದಂಬರಿಯಲ್ಲಿ ಹಳ್ಳಿಯ ಕೆಳಗೇರಿಯ ಪಟ್ಟಣದ ಕೊಳಗೇರಿಯ, ನಗರದ ಝೋಪಡ ಪಟ್ಟಿಯ ಮುಗ್ಧ ಹೆಂಗಸರ ಸಾಮಾಜಿಕ ಬದುಕನ್ನು ಚಿತ್ರಿಸಿದ್ದಾರೆ. ಝೋಪಡ ಪಟ್ಟಿಯ ಹೆಂಗಸರ ಪ್ರತಿದಿನದ ಜೀವನದ ಗೋಳನ್ನು ಕಥೆಯನ್ನಾಗಿಸಿದ್ದಾರೆ. ಇವರು ಗುಡಿಸಲ ಗೇರಿಯ ಹೆಂಗಸರ ಬದುಕನ್ನು ಅನಾವರಣಗೊಳಿಸುವ ಸಂದರ್ಭದಲ್ಲಿ ಆಡುನುಡಿಗಳ ಅಸಲೀ ಭಾಷೆಯನ್ನು ಬಹಳ ಸೊಗಸಾಗಿ ಬಳಸಿಕೊಂಡಿರುವುದು ಕಾದಂಬರಿಗೊಂದು ಶೋಭೆ ತಂದಿದೆ. "ಇದರವ್ವನಾ ಗಾಳಿನಾ ತಂದೂ... ಬಿಕನಾಸಿಗುಟ್ಟಿದ್ದು..." ಇದೂ ಜಮಾದಾರ ಮಲ್ಲಪ್ಪನು ಬೀಡಿಗೆ ಬೆಂಕಿಯನ್ನು ಹೊತ್ತಿಸಿಕೊಳ್ಳಲು ಹೋದಾಗ ಗಾಳಿಗೆ ಬೆಂಕಿ ಕಡ್ಡಿಯ ಉರಿ ಹಾರಿಹೋಗಿದ್ದರಿಂದ ಈ ಮಾತನ್ನು ಆಡುವುದು ಅಲ್ಲಿಯ ಗ್ರಾಮೀಣ ಭಾಷೆಯ ಕಸುವು ತನಕ್ಕೆ ಸಾಕ್ಷಿಯಾಗಿದೆ.

ಹೈದರಾಬಾದ್ ಕರ್ನಾಟಕದ ಕಲ್ಬುರ್ಗಿ ಜಿಲ್ಲೆಯವರಾದ ಲೇಖಕಿ ತಮ್ಮ ಸುತ್ತ ಮುತ್ತ ನಡೆಯುತ್ತಿದ್ದ ಜನರ ಜೀವನವನ್ನು ಕಥೆಯಾಗಿಸಿದ್ದಾರೆ. ಬದುಕು ಕಾದಂಬರಿಯಲ್ಲಿ ಕೆಳಜಾತಿಯ ಮಲ್ಲಪ್ಪನ ಜಮಾದಾರಿಕೆಯಂಥ ಒಂದು ಸರ್ಕಾರಿ ಉದ್ಯೋಗವು ಅವನಿಗೆ ಇದ್ದು ಇದರ ಜೊತೆಗೆ ಆಸ್ತಿಯು ಇದ್ದು ಕೊಳಗೇರಿಯಲ್ಲಿ ಅವನಿಗೆ ಒಂದು ಘನತೆ ಇತ್ತು ಪ್ರತಿಷ್ಠೆಯು ಇತ್ತು.

ಬದುಕು ಕಾದಂಬರಿ ಮಲ್ಲಪ್ಪ ಜಮಾದಾರನ ಆಗು ಹೋಗುಗಳ ಕಥೆಯಾಗಿದ್ದು ಕೆಳಜಾತಿಯವರು ಆಚರಿಸುವ ಆಚರಣೆಗಳು, ನಂಬಿಕೆಗಳು, ಸಂಪ್ರದಾಯಗಳು, ಜೀವನದ ರೀತಿನೀತಿಗಳು ಮೂಢನಂಬಿಕೆಗಳನ್ನು ಬಿತ್ತರಿಸುತ್ತಾ ಸಮಾಜದ ಕಣ್ಣು ತೆರೆಸುವ ಕೆಲಸವನ್ನು ಈ ಕಾದಂಬರಿ ಮಾಡುತ್ತದೆ.

ಗೌರವದಿಂದಲೇ ಬದುಕನ್ನು ಸವೆಸಿದ ಜಮಾದಾರನಾದ ಮಲ್ಲಪ್ಪನ ಕುಟುಂಬದಲ್ಲಿ ಆತನ ಹೆಂಡತಿ, ಇಬ್ಬರು ಹೆಣ್ಣು ಮಕ್ಕಳು, ಮತ್ತು ಒಬ್ಬ ಗಂಡು ಮಗ. ಇವರ ಜೀವನದ ಸುತ್ತಲೆ ಕಾದಂಬರಿ ಗಿರಕಿ ಹೊಡೆಯುತ್ತದೆ. ಕಾದಂಬರಿಯಲ್ಲಿ ಕೊಳಗೇರಿಯ ಹಿಂದುಳಿದ ಜನರ ನೋವು ನಲಿವುಗಳನ್ನು ದಲಿತ ಸ್ತ್ರೀಯರ ಮೇಲೆ ನಡೆಯುವ ಕ್ರೌರ್ಯ ಮತ್ತು ದುಡಿಮೆಯಲ್ಲಿನ ತಾರತಮ್ಯ, ಜನಾಂಗ ನಿಂದನೆ ಬದುಕಿನಲ್ಲಿ ಅನುಭವಿಸುತ್ತಿರುವ ಯಾತನೆಗಳನ್ನು ಕಾಣಬಹುದಾಗಿದೆ.

ಕಾದಂಬರಿಯು ಸಮಾಜದ ವಿಭಿನ್ನ ರೀತಿ ನೀತಿಗಳನ್ನು ತಿಳಿಸುತ್ತದೆ. ಪರಿಸರದಲ್ಲಿ ಸುತ್ತಮುತ್ತಲು ಇರುವ ಜೀವನ ಚಿತ್ರಣವನ್ನು ಹಾಗು ಆ ಪ್ರದೇಶದ ಸಾಂಸ್ಕೃತಿಕ ಆಚರಣೆ, ನಂಬಿಕೆ, ಶ್ರದ್ಧೆ, ಸಂಪ್ರದಾಯಗಳ ಕಡೆಗೂ ದೃಷ್ಟಿ ಹಾಯಿಸಿರುವುದನ್ನು ಕಾಣಬಹುದು.

ಶಿವಳ್ಳಿಯ ಹರದಾರಿ ದೂರದಲ್ಲಿರುವ ಹಳ್ಳಿ ಚುಂಚೂರು. ಇಲ್ಲಿ ಪ್ರತಿ ವರ್ಷ ಚುಂಚೂರು ಮಾಪುರತಾಯಿ ಜಾತ್ರೆ ನಡೆಯುತ್ತದೆ. ಈ ಜಾತ್ರೆ ಬಂದರೆ ಸಾಕು, ವಾರಕ್ಕೆ ಮೊದಲೇ ಆ ಹಳ್ಳಿಯಷ್ಟೇ ಅಲ್ಲದೆ ಸುತ್ತಮುತ್ತಿನ ಹತ್ತು ಹರದಾರಿಯವರೆಗಿನ ಹಳ್ಳಿಗಳಲ್ಲಿಯ ಕೆಳಗೇರಿಗಳೆಲ್ಲ ಶುಚಿಯಾಗುತ್ತವೆ. ಮ್ಯಾಗೇರಿ ಹಸನಾಗುತ್ತದೆ. ಹೊಲ ಮಾದಿಗರ, ಕಾಟಕ ಕಬ್ಬಲಿಗರ, ಕುರುಬ, ತಳವಾರ, ಬ್ಯಾಡ, ಗೊಲ್ಲರಂತೇಳಿ ಹಲವು ಹದಿನೆಂಟು ತರದ ಶೂದ್ರರ ಗುಡಿಸಲುಗಳಲ್ಲಿ ಹೆಂಡರಾಡಿಯಿಂದ ಮೈಸಾರಿಸಿಕೊಂಡು ನೆಲವನ್ನು ನುಣ್ಣಗೆ ಮಾಡಿಕೊಳ್ಳುತ್ತವೆ. ಬಟ್ಟೆ ಬರೆ, ಕೌದಿ, ಕಂಚಟಿ, ಚಿಂದಿ ರಗಟಿಗಳೆಲ್ಲ ಹೊಳೆ ನೀರಿನಲ್ಲಿ ಮಿಂದು ಮಡಿಯಾಗುತ್ತವೆ. ಹಾಗೆ ಮಡಿಯಾದ ಮೇಲೆ ಮುಗಿಯಿತು. ಮುಟ್ಟಾದ ಹೆಂಗಸರು ಮನೆಯೊಳಗೆ ಬರುವ ಹಾಗಿಲ್ಲ ಗಂಡ ಹೆಂಡತಿ ಒಂದೇ ಹಾಸಿಗೆಯಲ್ಲಿ ಮಲಗಿದರೂ ಮಗ್ಗಲು ಕೂಡಿಸುವ ಹಾಂಗಿಲ್ಲ![೩]

ಇಡೀ ಗ್ರಾಮವೇ ಶುಭ್ರತೆಗೆ ಸಾಕ್ಷಿಯಾಗುತ್ತದೆ. ಒಂದು ತಿಂಗಳ ಕಾಲ ನಡೆಯುವ ಜಾತ್ರೆಗೆ ಮಾಪುರತಾಯಿ ಕುರಿ, ಮೋರಂ ದೇವರ ಕುರಿ, ಮನಿಲಗಸಿಮಿಯ ಕುರಿ ಅಂತ ಹೆಸರಿಟ್ಟು ಸಾಕಿರುವ ಹೋತಗಳನ್ನು ಬಲಿ ಕೊಡುತ್ತಾರೆ. ಎಲ್ಲಾ ವರ್ಗದ ಜನರು ಜಾತ್ರೆಯನ್ನು ಅದ್ದೂರಿಯಾಗಿ ಆಚರಿಸುತ್ತಾರೆ. ಇಲ್ಲಿ ಬಡವ, ಶ್ರೀಮಂತ ಎಂಬ ಭೇದ ಭಾವವಿಲ್ಲದೆ ಎಲ್ಲರೂ ಸೇರಿ ಉತ್ಸಾಹದಿಂದ ಆಚರಿಸುತ್ತಾರೆ. ಇನ್ನು ನಾಗರ ಪಂಚಮಿಯ ಹಬ್ಬವನ್ನು ಸಾಮಾಜಿಕವಾಗಿ ಎಲ್ಲರು ಆಚರಿಸುವುದನ್ನು ಕಾಣಬಹುದಾಗಿದೆ. ಆ ಗ್ರಾಮದ ಎಲ್ಲಾ ಹೆಣ್ಣುಮಕ್ಕಳು ಹೊಸ ಬಟ್ಟೆಗಳನ್ನು ಹಾಕಿಕೊಂಡು ತಂಬಿಟ್ಟಿನ ಉಂಡೆ, ಕಡುಬು, ಕೊಬ್ಬರಿ, ಹಾಲು ತೆಗೆದುಕೊಂಡು ಹುತ್ತಗಳಿಗೆ ಹಾಗು ನಾಗರ ಕಲ್ಲುಗಳಿಗೆ ಹಾಲನ್ನು ಎರೆಯುವ ಪದ್ಧತಿಯನ್ನು ಹಾಗು ಭಕ್ತಿಯಿಂದ ಪೂಜಿಸುವ ಕ್ರಮವನ್ನು ಕಾಣುತ್ತೇವೆ.

---

೩. ಗೀತಾ ನಾಗಭೂಷಣ್-ಬದುಕು: ಪುಟ-೩೫ ಲೋಹಿಯಾ ಪ್ರಕಾಶನ.೨೦೦೧

ಸಮಾಜದಲ್ಲಿ ದಿನದಿಂದ ದಿನಕ್ಕೆ ಮನುಷ್ಯ ಬೆಳೆಯುವುದರ ಜೊತೆಗೆ ತನ್ನ ಜ್ಞಾನದ ಪರಿಧಿಯನ್ನು ವಿಸ್ತರಿಸಿ ಕೊಳ್ಳುತ್ತಾ ಸಾಗುವುದು ಸಹಜ. ಆದರೆ ಶಿವಳ್ಳಿಯಲ್ಲಿನ ಜನ ಮತ್ತು ಅಲ್ಲಿನ ಬದುಕು ಆರಕ್ಕೆ ಹತ್ತದ ಮೂರಕ್ಕೆ ಇಳಿಯದೆ ನಿಂತ ನೀರಾಗಿರುವುದನ್ನು ಕಾಣಬಹುದು. ದೇವರ ಮೇಲಿನ ಭಯ ಭಕ್ತಿ ಒಂದು ಕಡೆಯಾದರೆ ಅನಕ್ಷರತೆ ಮತ್ತು ಅರಿವಿನ ಕೊರತೆ ಮತ್ತೊಂದಾಗಿದೆ. ಹಾಗೆಯೇ ಅಸಂಘಟಿತ ಮನೋಭಾವ ಒಂದೆಡೆಯಾದರೆ, ತಮ್ಮನ್ನು ಕಿತ್ತು ತಿನ್ನುವ ಬಡತನ ಮತ್ತೊಂದೆಡೆಯಾಗಿದೆ. ಇಂತಹ ಹಲವು ಕಾರಣಗಳು ತಮ್ಮನ್ನು ಅಸಹಾಯಕತೆಗೆ ದೂಡಿದ್ದು, ಸಹಜವಾಗಿಯೇ ಇದರ ಲಾಭವನ್ನು ಮೇಲುಜಾತಿಯ ಜನ ಅನುಭವಿಸುವಂತಹ ಸ್ಥಿತಿಗೆ ಕಾರಣೀಭೂತವಾಗಿದೆ. ಮಾತ್ರವಲ್ಲ, ಜೋಗಣಿ ಬಿಡುವ ಸಂಸ್ಕೃತಿ ಕೇಳಜಾತಿಯಲ್ಲಿ ಮಾತ್ರವಿದ್ದು ಇಂತಹ ಜೋಗತಿ ನಡುವಿನ ಮೊದಲ ರಾತ್ರಿಯ ಅನುಭವವನ್ನು ಮೇಲ್ಜಾತಿಯ ಜನ ಅನುಭವಿಸಿಕೊಂಡು ಬರುತ್ತಿರುವುದು ಅತ್ಯಂತ ಅವಮಾನಕರವಾದ ಸಂಗತಿಯಾಗಿದೆ. ಹೀಗೆ ಒಂದುಬಾರಿ ಜೋಗಣಿಯಾದರೆ ಅವರ ಬದುಕಿನ ಅಧ್ಯಾಯ ಮುಗಿದಂತೆಯೇ ಸರಿ. ಬದುಕಿನಲ್ಲಿ ಮತ್ತೆಂದೂ ಹೊಸ ಕನಸನ್ನು ಕಟ್ಟಿಕೊಳ್ಳದೆ ದೇವಿಯ ಹೆಸರು ಹೇಳಿ ಬರುವ ಪುರುಷರಿಗೆ ತನ್ನ ದೇಹವನ್ನು ಒಪ್ಪಿಸಿಕೊಂಡು ಅಂತರ ಪಿಶಾಚಿಗಳಾಗಿ ಬದುಕಬೇಕಾಗುತ್ತದೆ. ಇಂತಹ ಜೋಗಣಿಗೆ ಹುಟ್ಟುವ ಮಕ್ಕಳಿಗೆ ತಂದೆಯ ಹೆಸರಿಲ್ಲ ತಾಯಿಯ ಹೆಸರು ಮಾತ್ರ ಉಳಿಯುವುದು. ಇನ್ನು ಅವಳ ಮುಂದಿನ ಬದುಕು ಅತ್ಯಂತ ಧಾರುಣವಾಗಿದ್ದು ಭಿಕ್ಷೆ ಬೇಡಿ ಜೀವನ ದೂಡಬೇಕಾಗುತ್ತದೆ.

ಈ ಪದ್ಧತಿಯನ್ನು ಕೆಳ ಸಮೂಹಗಳಿಗೆ ಪ್ರಶ್ನೆ ಮಾಡುವ ಮನಸ್ಸಿದ್ದರೂ, ಎಲ್ಲಿ ಮಾಪುರತಾಯಿಯ ಕೋಪಕ್ಕೆ ತುತ್ತಾಗುತ್ತೇವೆಯೋ ಎನ್ನುವ ಆತಂಕವೂ ಅವರನ್ನು ಕಾಡಿದೆ. ಜಮಾದಾರ ಮಲ್ಲಪ್ಪನ ಹೆಂಡತಿ ತನ್ನ ಮನದಲ್ಲಿ ಮೂಡಿದ ಸಂಶಯವನ್ನು ರಾತ್ರಿ ಗಂಡನ ಬಳಿ ತೋಡಿಕೊಂಡ ಪ್ರತಿಕ್ರಿಯೆಗಳು ಅದನ್ನೇ ಸೂಚಿಸುತ್ತವೆ. ಜೋಗಣಿ ಎನ್ನುವುದು ಕೇವಲ ಕೆಳಜಾತಿಯವರಿಗೆ ಮಾತ್ರ ಇದೆ. ಮೇಲ್ ಜಾತಿಯವರಿಗೆ ಯಾಕೆ ಇಲ್ಲ. ಇದರಲ್ಲಿ ಸಂಚುಗಳೇನಾದರು ಇರಬಹುದ ಎಂಬ ಅನುಮಾನ ವ್ಯಕ್ತಪಡಿಸುತ್ತಾಳೆ. ಇದಕ್ಕೆ ಜಮಾದಾರಿಕೆಯಂತಹ ಸರ್ಕಾರಿ ಕೆಲಸವನ್ನು ಮಾಡುವ ಮಲ್ಲಪ್ಪ ಊರಿನ ಪ್ರಮುಖರಲ್ಲಿ ಒಬ್ಬನಾದ ಈತನು ಕೊಡುವ ಉತ್ತರ ಸಮಾಜದ ಕನ್ನಡಿಯಾಗಿ ತೋರುತ್ತದೆ. "ಹೊಲಗೇರಿ ಹೆಂಗಸರು ಜೋಗಣಿ ಆಗಾದು?... ಮ್ಯಾಗೇರಿ ಮಂದಿ ಅಂದರ ಗಂಡಸರು ಅವರಿಗಿ 'ಪಟ್ಟಕ್ಕ' ಹಾಯ್ಕೊಂಡು ಅವರ ಮೈ ಉಂಡು ಬಿಡಾದೂ... ತಮ್ಮ ಮೈ ತಿಂಡಿ ತೀರಿದ ಮ್ಯಾಲ ಅಕೆಗಿ ದೂರ ತಳ್ಳಾದೂ ಮುಂದಕಿ ಹಾದರಕ್ಕಿಳ್ದು ಹೊಟ್ಟೆ ತುಂಬಸ್ಕೊಳ್ಳಾದೂ ಅಂದ್ರ ಹೂ ನಮಗ್ಯಾಕ ಬಿಡು. ಇದು ಹಿಂದಿನ ಹತ್ತೆಂಟು ತಲೆಮಾರಿಂದ ನಡ್ಕೋತ ಬಂದಾದ.

ನಾವು ಏನರೆ ಅಂದು ಆ ಮಾಪುರತಾಯಿ ದೇವಿ ಸಿಟ್ಟಿನ ಕಣ್ಣಿಗೆ ಗುರಿಯಾಗದು ನಮಗ್ಯಾಕ ಬೇಕು ಬಿಡು ಇದೆಲ್ಲಾ ತಾಯಿ ನಮ್ಮವ್ವಾ ಮಾಫಿ ನೀಡೇ ನಮ್ಮವ್ವಾ..."[೪] ಅಂತಂದು ಮಲಗಿದಲ್ಲೇ ತಮ್ಮಿಂದ ಅನ್ಯಾಯವಾಯಿತಿ ಎಂದು ಗಲ್ಲಗಲ್ಲ ಬಡಿದುಕೊಳ್ಳುವ ಮಲ್ಲಪ್ಪನ ಹಾಗೂ ಮಲ್ಲವ್ವನೂ ಗಲ್ಲ ಬಡಿದುಕೊಂಡು ಮಲಗುವುದು, ಅವರಲ್ಲಿ ಇನ್ನೂ ಮನೆ ಮಾಡಿಕೊಂಡಿರುವ ಮಾಪುರತಾಯಿಯ ಬಗೆಗಿನ ಮೂಢನಂಬಿಕೆ, ಭಯ ಎಂತಹದ್ದೆಂಬುದು ಸ್ಪಷ್ಟವಾಗುತ್ತದೆ.

ಮಲ್ಲಪ್ಪನಂತಹ ಹಿರಿಯರು ಇದರ ಹಿಂದಿರುವ ಮರ್ಮವೇನು? ಇಂತಹ ಆಚರಣೆಗಳ ಸೃಷ್ಟಿಯಾದರು ಏಕೆ ಆಯಿತು? ಎಂದು ಪ್ರಶ್ನೆ ಹಾಕಿಕೊಂಡು ನೂರಾರು ವರ್ಷಗಳ ಹಿಂದೆ ಏಕೆ ಈ ರೀತಿ ಮಾಡುತ್ತಿದ್ದರು ಎಂದು ಕೆದಕಲು ಹೋಗುವುದಿಲ್ಲ. ನಮ್ಮ ಪ್ರಜ್ಞಾವಂತ ನಾಗರೀಕ ಸಮಾಜ ಸಾವಿರಾರು ವರ್ಷಗಳಿಂದ ಬಂದಂತಹ ಹಲವಾರು ಆಚರಣೆಯನ್ನು ಅರಿಯದೆ ಪಾಲಿಸಿಕೊಂಡು ಬರುತ್ತಿದ್ದಾರೆ. ಇವು ತಮ್ಮ ಸಮಾಜದ ಸಾಮಾಜಿಕ ಪಿಡುಗುಗಳಾಗಿ ಪರಿಣಮಿಸುತ್ತಿದ್ದರೂ ಜನ ಭಯಬೀತರಾಗಿ ಜಮಾದಾರ ಮಲ್ಲಪ್ಪನ ದಾರಿಯನ್ನೇ ತುಳಿಯುತ್ತಾರೆ.

ಎಚ್ಚತ್ತ ಜನಸಮುದಾಯವಾದರೆ ಮೂಢನಂಬಿಕೆಗಳನ್ನು ಪ್ರಶ್ನಿಸಿ ಒಪ್ಪಿಕೊಳ್ಳುತ್ತಾರೆ. ಸಮಾಜದ ಬದಲಾವಣೆಗೆ ಕಾರಣೀಭೂತರಾಗುತ್ತಾರೆ. ಕುಕ್ಕೆ ಸುಬ್ರಹ್ಮಣ್ಯದಲ್ಲಿ ಬ್ರಾಹ್ಮಣರ ಊಟವಾದ ನಂತರ ದಲಿತರು ಎಂಜಲು ಎಲೆಗಳ ಮೇಲೆ ಉರುಳುವ ಮಡೆಸ್ನಾನದಂತಹ ಆಚರಣೆಗಳ ಇತಿಹಾಸವೇನು ಎಂಬುದು ಯಾರಿಗೂ ತಿಳಿದಿಲ್ಲ. ದಲಿತರ ಪಾಪ ಪರಿಹಾರಕ್ಕೆ, ಅಭಿವೃದ್ಧಿಗೆ ಎಂದು ತಿಳಿಯೋಣವೆಂದರೆ ಮೇಲ್ವರ್ಗದವರ್‍ಯಾರು ಮಡೆಸ್ನಾನ ಮಾಡದಯೇ ತಾವು ಮಾತ್ರ ಅದರಿಂದ ಹೊರಗಿರುವುದನ್ನು ಕಾಣುತ್ತೆವೆ.

ಇಂತಹ ಆಚರಣೆಗಳನ್ನು ನಿಷೇದಿಸಲು ಹೊರಟರೆ ಯಾವ ರೀತಿಯ ಹೋರಾಟಗಳು, ವಿರೋಧಗಳು ವ್ಯಕ್ತವಾಗುತ್ತವೆ ಎಂಬುದಕ್ಕೂ ಮಡೆಸ್ನಾನದಂತಹ ನಿದರ್ಶನವೇ ಸಾಕ್ಷಿ. ಸಮಾಜವನ್ನು ಶುಚಿಗೊಳಿಸುವ ಸಂದರ್ಭದಲ್ಲಿ ನಾಗರೀಕರು ಯಾವ ರೀತಿ ವರ್ತಿಸುತ್ತಾರೆ. ಏಕೆ ಸಾಮಾಜಿಕ ಆಚರಣೆಗಳನ್ನು ನಿಷೇಧಿಸಲು ಸಾಧ್ಯವಿಲ್ಲದಂತಹ ಸ್ಥಿತಿಗೆ ನಮ್ಮ ಮಾನಸಿಕ ಸ್ಥಿತಿಗತಿಗಳು ತಲುಪಿವೆ. ಒಂದಂತೂ ಸತ್ಯ. ವಿದ್ಯಾವಂತನಾಗದ, ಸ್ವಾಭಿಮಾನಿಯಾಗದ, ಪ್ರಜ್ಞಾವಂತನಾಗದ ಆರ್ಥಿಕವಾಗಿ ಬೆಳೆಯದ ಹೊರತು ಇಂತಹ ಪಿಡುಗುಗಳಿಂದ ಮುಕ್ತನಾಗುವುದಕ್ಕೆ ಸಾಧ್ಯವಿಲ್ಲವೆನ್ನಿಸುತ್ತದೆ. ಬದುಕು ಕಾದಂಬರಿಯಲ್ಲಿ ವರ್ಣಿತವಾಗಿರುವ ಕೆಳಸಮೂಹಕ್ಕೆ ಇಂತಹ ಕೊರತೆಗಳು ಅವರಲ್ಲಿ ಇದ್ದು ಮೂಢನಂಬಿಕೆಯಿಂದ ಹೊರಬರಲಾರದ ಸ್ಥಿತಿಗೆ ತಮ್ಮನ್ನು ತೆತ್ತುಕೊಂಡಿದ್ದಾರೆ.

---

೪. ಗೀತಾ ನಾಗಭೂಷಣ್-ಬದುಕು: ಪುಟ-೬೭ ಲೋಹಿಯಾ ಪ್ರಕಾಶನ.೨೦೦೧

'ಬದುಕು' ಕಾದಂಬರಿಯಲ್ಲಿಯೂ ಸಹ ಮೂಢನಂಬಿಕೆ, ಕೆಟ್ಟ ಆಚರಣೆಗಳು ನೀತಿ ನಿಯಮಗಳು ಇದ್ದು ಆ ಮೌಢ್ಯತೆಗಳಿಗೆ ಹೆಚ್ಚಾಗಿ ಬಲಿಯಾಗುವುದು ಹೆಣ್ಣೆ ಎಂಬುದು ವಾಸ್ತವದ ಸಂಗತಿ.

'ಉಪ್ಪು ತಿಂದವನು ನೀರು ಕುಡಿಯಲೇ ಬೇಕು' ತಪ್ಪುಗಳನ್ನು ಮಾಡಿದರೆ ಶಿಕ್ಷೆ ಕಟ್ಟಿಟ್ಟದ್ದೆ. ನಮ್ಮ ತಪ್ಪುಗಳೇ ಶಿಕ್ಷೆಯ ಎಚ್ಚರಿಕೆಯನ್ನು ನೀಡುತ್ತವೆ ಎಂದು ನಮ್ಮನ್ನು ನಾವು ಸಮಾಧಾನಿಸಿಕೊಂಡರೂ ಹೆಚ್ಚಾಗಿ ಶಿಕ್ಷೆಗೊಳಗಾಗುವುದು ಹೆಣ್ಣು ಮಾತ್ರವಾಗಿದೆ. ತಾನು ಯಾವುದೇ ತಪ್ಪು ಮಾಡಿಲ್ಲದಿದ್ದರೂ, ತಪ್ಪಿನಲ್ಲಿ ತನ್ನ ಪಾತ್ರವೇನು ಇಲ್ಲದಿದ್ದರೂ ಶಿಕ್ಷೆಯನ್ನು ಅನುಭವಿಸುವುದು ಹೆಣ್ಣು ಮಾತ್ರ.

ಮಾರುತಿ ಝೋಪಡಿ ಪಟ್ಟಿಯಲ್ಲಿ ವಾಸವಿರುವ ನಾಗ್ಯಾ ಪ್ರತಿದಿನ ಸೂಪರ್ ಮಾರ್ಕೆಟ್ ಬಸ್ ನಿಲ್ದಾಣದಲ್ಲಿ ನಿಲ್ಲುವುದು, ಬಸ್ಸು ಬಂದು ನಿಲ್ಲುವಾಗ ಹೋಗುವಾಗಲೆಲ್ಲಾ ಆ ಜನರ ಗುಂಪಿನಲ್ಲಿ ಒಳಹೊಕ್ಕಿ ತಾನು ಬಸ್ಸಿನ ಪ್ರಯಾಣಿಕನಂತೆ ನಿಂತು ಗಂಡಸರ ಜೇಬಿಗೆ ರೇಜರಪತ್ತಿ ಹಾಕಿಕೊಯ್ದು ಅವರ ಬಳಿ ಇರುವ ಹಣ, ಪಾಕೆಟ್ಟು ಹಾರಿಸಿಕೊಂಡು ಬರುವ ಕೆಲಸವನ್ನು ಮಾಡುತ್ತಾನೆ. ಇವನು ಮಾಡುವ ಇಂತಹ ದುಷ್ಕೃತ್ಯಕ್ಕೆ ಇವನಿಗೆ ಶಿಕ್ಷೆಯಾಗದೆ ಊರಿನ ಹೆಣ್ಣುಮಕ್ಕಳಿಗೆ ಹಾಗು ನಾಗ್ಯಾನ ಹೆಂಡತಿಗೆ ಪೋಲಿಸರು ಕಿರುಕುಳವನ್ನು ಕೊಡುತ್ತಾರೆ.

ಊರಿನೊಳಗೆ ಪೋಲಿಸರು ಬಂದಿದ್ದನ್ನು ನೋಡಿ ಜನರೆಲ್ಲಾ ಕಕ್ಕಾಬಿಕ್ಕಿಯಾಗುತ್ತಿರುವಾಗಲೇ, ಇನ್ಸ್‌ಪೆಕ್ಟರ್ ಎಲ್ಲಾ ಗುಡಿಸಲುಗಳಿಗೆ ನುಗ್ಗಿ ಆ ಬೋಸಡಿ ಮಗಾ ನಾಗ್ಯಾ ಎಲ್ಲಿದ್ದಾನೊ ಒದ್ದು ಎಳೆದುಕೊಂಡು ಬನ್ನಿ ಎಂದು ತನ್ನ ಕಾನ್ಸೆಟೇಬಲ್‌ಗಳಿಗೆ ಆಜ್ಞೆಯನ್ನು ಮಾಡಿದಾಗ, ಪೋಲಿಸರು ಮಾನವೀಯತೆಯನ್ನು ಮರೆತು ಕ್ರೂರವಾಗಿ ವರ್ತಿಸುವುದನ್ನು ಕಾಣುತ್ತೇವೆ.

ಶಾಣಪ್ಪನ ಹೆಂಡತಿ ಬಸ್ಸಮ್ಮ ಆಗ ತಾನೇ ಕೂಲಿ ಕೆಲಸ ಮುಗಿಸಿ ಗುಡಿಸಲಿಗೆ ಬಂದು ಹಸಿದ ತನ್ನ ಮಗುವಿಗೆ ಹಾಲೂಡಿಸುತ್ತಿರುತ್ತಾಳೆ. ಧಡಕ್ಕನೆ ಪೋಲಿಸನೊಬ್ಬ ಬಂದಾಗ ಗಾಬರಿಯಿಂದ ತನ್ನ ಮಗುವನ್ನೆತ್ತಿ ಎದ್ದು ನಿಲ್ಲುತ್ತಾಳೆ. "ಯಾಕ್ರೀ...ಯಪ್ಪಾ...ಏನಾಯ್ತು?" ಧೈರ್ಯಗೆಡದೆ ಅವಳು ಕೇಳಿದಾಗ ಪೇದೆ ಅವಳ ದೇಹವನ್ನು ನೋಡಿ ಹುಚ್ಚುಚ್ಚಾಗಿ ನಗುತ್ತಾ "ಎಲ್ಲಿ ಅಡಗ್ಯಾನ ಆ ನಾಗ್ಯ ಹೇಳಬೇ ಇಲ್ಲಂದ್ರ ಹೊಡ್ದು ನಿನ್ ಟೊಂಕ ಮುರಿರೀತಿನಿ ನೋಡು ಎಂದು ಅವಳ ಮೈಮೇಲೆ ಹಾಯುತ್ತಾನೆ. ಮಾತನಾಡಲು ಹೋದ ಬಸ್ಸಮ್ಮನಿಗೆ "ಯೆಲ್ಲಾ ಝೋಪಡಪಟ್ಟ್ಯಾಗ ಹುಡಕ್ಬೇಕಂದಾರ ನಮ್ಮ ಸಾಬ್ರು ಅವನ ಹುಕುಮಾಗ್ಯಾದೇ ನಿನ್ನವ್ವನಾ ನಿಮ್ಮಂದೀ ಗುಣ ನಮಗ್ಗೊತ್ತಿಲ್ಲೇನು? ಒಬ್ಬಾಂವ ಮಾಂವರೆ ಕಳ್ಳತನ ಮಾಡಿ ಓಡಿ ಬಂದ್ರ ಪೂರ ಬಸ್ತ್ಯಾಗೆ ಯಾರ ಗುಡುಸ್ಯಾಗರೇ

ಮುಚ್ಚಿಡ್ತೀರಿ ಆ ಕಳ್ಳಗ ಎಲ್ಲೋರದೂ ಝೋಪಡಿ ತಲಾಶ್ ಮಾಡ್ತೀವೀ...ಹುಂ...ಸರಿ ಅಕಾಡೀ...”೫ ಎನ್ನುತ್ತಾ ಜಬರದಸ್ತಿಯಿಂದ ಅವಳ ರಟ್ಟೆಗೆ ಕೈಹಾಕಿ ಝಾಡಿಸಿ ಎಳೆದ ರಭಸಕ್ಕೆ ಅವಳು ಆತನೆದೆಗೆ ಬಡಿದು ನಿಲ್ಲುತ್ತಾಳೆ. ಆ ರಭಸಕ್ಕೆ ಕೂಸಿನ ನೆತ್ತಿಗೆ ಗೋಡೆ ಬಡಿದು ಜೀವ ಹೋದಂತೆ ಅಳತೂಡಗುವುದನ್ನು ಕಾಣುತ್ತೇವೆ. ಇದು ಇಷ್ಟಕ್ಕೆ ನಿಲ್ಲದೆ, ಪಕ್ಕದ ಗುಡಿಸಲಿನಲ್ಲಿ ಆಡುಗೆ ಮಾಡಲು ಒಲೆಯನ್ನು ಊದುತ್ತಾ ಕುಳಿತಿದ್ದ ಸಕ್ಕೂಬಾಯಿಯ ರಟ್ಟೆಯನ್ನು ಹಿಡಿದು ಹೊರಗೆ ಎಳೆದು ಜಗ್ಗುವುದನ್ನು ಕಾಣುತ್ತೇವೆ. ಸಕ್ಕೂಬಾಯಿ ಅವನಿಂದ ತಪ್ಪಿಸಿಕೊಳ್ಳಲು ಕೊಸರಾಡಿದರೂ ಬಿಡದ ಪರಿಣಾಮದಲ್ಲಿ ಆತನನ್ನು ಬೈಯುತ್ತಾ, ಲಟ್ಟಿಗೆಯನ್ನು ಮುರಿಯುವುದನ್ನು ಕಾಣುತ್ತೇವೆ.

ನಂತರ ಪೋಲಿಸರು ನಾಗ್ಯಾನ ಝೋಪಡಿಗೆ ನುಗ್ಗುತ್ತಾರೆ. ಕೌದಿ, ರಗಟಿಯ ಮೇಲೆ ನರಳುತ್ತಿದ್ದ ಅವನ ಹೆಂಡತಿ ಹೊಟ್ಟೆ ಹಿಡಿದುಕೊಂಡು ಮೆಲ್ಲಗೆ ಎದ್ದು ಕುಳಿತಾಗ. “ಏ ನಾಗ್ಯಾಯೆಲ್ಲಿ?” ಅಂತ ಬೆದರಿಸುತ್ತಲೇ ನುಗ್ಗಿದ ಪೋಲಿಸರ ಲಾಠಿ ಏಟಿಗೆ ಅಡಕಿಲೇರಿಸಿದ್ದ ಗಡಿಗೆ ಮಡಿಕೆಗಳು ಹೊಡೆದು ಚೂರಾಗುತ್ತವೆ. ಗಡಿಗೆಯಲ್ಲಿ ಇದ್ದಂತಹ ಅನಾಜು, ಹಿಟ್ಟು, ಕಾರ ಉಪ್ಪು ಮೊದಲಾದ ಎಲ್ಲಾ ವಸ್ತುಗಳು ನೆಲದ ಮೇಲೆ ಹರಿದಾಡಿದ್ದನ್ನು ಕಾಣಬಹುದು. ಗಂಡ ಎಲ್ಲಿಗೆ ಹೋದನೆಂದು ಗೊತ್ತಿಲ್ಲವೆಂದು ಹೇಳಿ ಅಳುತ್ತಾ ಕುಳಿತ ಗುಜ್ಜವ್ವನ ಬೆನ್ನಿನ ಮೇಲೆ ಪೋಲಿಸನು ಬೂಟುಗಾಲಿನಿಂದ ಒದೆಯುತ್ತಾನೆ. “ಖರೇ ಹೇಳು ಎಲ್ಲಿ ಅಡಕ್ಕೊಂಡಾನ ನಿನ್ ಗಂಡಾ? ಇಲ್ಲಂದ್ರ ಛೀನಾಲೀ ನಿನಗೆಳ್ಕೊಂಡು ಒಯ್ತೀವಿ ಠೇಸನ್ನಿಗಿ ಅಲ್ಲೋಯ್ದು ನಿನಗ ಒದೀಲಕತ್ತರ ನಿನ್ ಗಂಡ ನಾಗ್ಯಾ ಎಲ್ಲಿದ್ದರನೂ ತಾನೇ ಓಡಿ ಬತ್ತಾನ ನಂಬಲ್ಲಿ ಹಿಡ್ಕೊಂಡು ಬಂದು ಅವಳ ರಟ್ಟೆ ಹಿಡಿದು ಎಳೆಯುತ್ತಾನೆ. ಮೊದಲೇ ಹೊಟ್ಟೆ ನೋವಿನಿಂದ ಬಳಲಿ ಮಲಗಿದ್ದ ಇವಳಿಗೆ ಮತ್ತಷ್ಟು ಮಾನಸಿಕವಾಗಿ ಕುಬ್ಜಳಾಗುವಂತೆ ಮಾಡುತ್ತದೆ.

ಕಾನೂನು ಕೈಯಲ್ಲಿ ಇದೆ ಎಂದು ಹೇಗೆ ಬೇಕಾದರೂ ನಡೆದುಕೊಳ್ಳಬಹುದೆಂಬ ಧೀಮಂತಿಕೆಯ ಚಿತ್ರಣವನ್ನು ಇಲ್ಲಿ ಕಾಣುತ್ತೇವೆ. ಗಂಡ ಕಳ್ಳತನ ಮಾಡಿದ್ದಕ್ಕೆ ಹೆಂಡತಿ ಶಿಕ್ಷೆ ಅನುಭವಿಸುತ್ತಿದ್ದಾಳೆ. “ಬಟ್ಟೆಯ ಮೇಲೆ ಮುಳ್ಳು ಬಿದ್ದರೂ, ಮುಳ್ಳಿನ ಮೇಲೆ ಬಟ್ಟೆ ಬಿದ್ದರೂ ಹರಿಯುವುದು ಮಾತ್ರ ಬಟ್ಟೆಯೇ” ಎಂಬ ಜನಪದ ಗಾದೆಯಂತೆ ಗಂಡ ನಾಗ್ಯಾನ ಕಳ್ಳತನದ ದಂದೆಯಿಂದಾಗಿ ಅದರ ಪರಿಣಾಮವನ್ನು ಗುಜ್ಜವ್ವನು ಎದುರಿಸುತ್ತಾಳೆ. ಸಮಾಜದಲ್ಲಿ ಇದು ವ್ಯಾಪಕವಾಗಿ ಪಸರಿಸಿದ್ದು ಹೆಣ್ಣು ಬವಣೆಗಳಲ್ಲೇ ಬದುಕನ್ನು ಸವೆಸುತ್ತಿದ್ದಾಳೆ. ಕಲ್ಯಾಣಿಯು ಕೊಲೆ ಆಪಾದನೆ ಮೇಲೆ ಜೈಲು ಸೇರಿ ಹದಿನಾಲ್ಕು ವರ್ಷಗಳ

---

೫. ಗೀತಾನಾಗಭೂಷಣ: ಬದುಕು: ಪುಟ:೨೩೯:ಲೋಹಿಯಾ ಪ್ರಕಾಶನ ೨೦೦೫

ಶಿಕ್ಷೆಯನ್ನು ಅನುಭವಿಸಿ ಮನೆಗೆ ಹಿಂತಿರುಗಿದ್ದನು. ಇವನನ್ನು ಮೊದಲಿನ ಹಾಗೇ ಎಲ್ಲರ ಮನೆಗಳಲ್ಲಿ ಸೇರಿಸಿಕೊಳ್ಳಲು ಶುದ್ಧ ಮಾಡಿಸಬೇಕೆಂದು ಊರಿನ ಹಿರಿಯರು ಹೇಳುತ್ತಾರೆ. ಬೆಳ್ಳಿಗೆ ಸಂಸಾರವನ್ನು ನಿಭಾಯಿಸಿ ಗಂಡನ ಕೊಲೆ ಕೇಸಿನ ವಿಷಯವಾಗಿ ಸಾಕಷ್ಟು ಹಣವನ್ನು ಕಳೆದುಕೊಂಡಿದ್ದಳು. ಕುಲಬಾಂಧವರೊಳಗೆ ಊಟ ಹಾಕಿಸುವುದು ದಂಡ ಕಟ್ಟುವುದು ಕಷ್ಟವಾಗಿದ್ದರೂ ಅದನ್ನು ವಸೂಲಿ ಮಾಡಿಯೇ ತೀರುತ್ತಾರೆ. ಮೂಢನಂಬಿಕೆ, ಆಚರಣೆ ಹೆಸರಿನಲ್ಲಿ ಸಮಾಜದ ಶೋಷಣೆಯನ್ನಿಲ್ಲಿ ಕಾಣಬಹುದಾಗಿದೆ.

ಜಾತಿಯ ವಿಚಾರಗಳು ಬಂದಾಗಲಂತೂ ಅದರಲ್ಲಿ ರಾಜಿಯಾಗುವ ಪ್ರಶ್ನೆಗಳೇ ಕಾಣಬರುವುದಿಲ್ಲ. ವೈಚಾರಿಕತೆಯು ಮೂಡಿ ಹೊಸ ಶಕೆಗೆ ಹೆಜ್ಜೆಯನ್ನು ಇರಿಸುತ್ತಿರುವ ಈ ಕಾಲಘಟ್ಟದಲ್ಲಯೂ ಜಾತಿಯ ಹೆಸರಿನ ಶೋಷಣೆ ನಡೆಯುತ್ತಲೆ ಇವೆ. ಪ್ರಜ್ಞಾವಂತ ನಾಗರೀಕರೆ ಈ ಜಾತಿ ವ್ಯವಸ್ಥೆಯನ್ನು ಮುಂದುವರೆಸಿಕೊಂಡು ಹೋಗುತ್ತಿದ್ದಾರೆ. ಅದಕ್ಕೆ ಹೆಚ್ಚಿನದಾಗಿ ಬಲಿಯಾಗುವುದು ಹೆಣ್ಣೇ ಆಗಿದ್ದಾಳೆ. ಈ ಕಾದಂಬರಿಯಲ್ಲಿ ಅಂತಹ ಶೋಷಣೆಯು ನಡೆದಿದ್ದು ಪ್ರೀತಿ ಪ್ರೇಮಗಳ ವಿಷಯದಲ್ಲಿ ಮತ್ತಷ್ಟು ಕ್ರೂರವಾಗುವುದನ್ನು ಕಾಣಬಹುದಾಗಿದೆ. ಮಲ್ಲಪನ ಮಗಳು ಕಾಶಮ್ಮ ಹಾಗು ಗೌಡನ ಮಗ ಲಿಂಗರಾಜು ಇಬ್ಬರು ಪರಸ್ಪರ ಪ್ರೀತಿಸುತ್ತಾರೆ. ಆದರೆ ಇವರ ಪ್ರೀತಿಗೆ ಅಡ್ಡವಾಗಿ ನಿಲ್ಲುವ ದೊಡ್ಡ ಕಂದಕವೆಂದರೆ ಜಾತಿ. ಈ ಜಾತಿಯನ್ನು ಮೀರಿ ಇಬ್ಬರ ಮನೆಯವರು ಮದುವೆ ಮಾಡುವ ಗೋಜಿಗೆ ಹೋಗದೆ ಅವರಿಬ್ಬರನ್ನು ಅಗಲಿಸುತ್ತಾರೆ. ಅಂತರ್‌ಜಾತಿಯ ವಿವಾಹಗಳು ಬಂದಾಗ ಸಮಾಜ ತನ್ನ ಕಪ್ಪು ಮುಖವನ್ನು ಪ್ರದರ್ಶಿಸುತ್ತದೆ.

ಅಂತರಜಾತೀಯ ಮದುವೆ ಎಂಬುದು ವೈದಿಕ ಜಾತಿ ವ್ಯವಸ್ಥೆಯಲ್ಲಿ ಸರ್ವರ ಸಹನೀಯ ಸಂಗತಿಯೇನಲ್ಲ. ಅದರಲ್ಲೂ, ಮೇಲಿನ ಜಾತಿಯ ಹೆಣ್ಣೊಂದು ಕೆಳಜಾತಿಯ ಗಂಡಿಗೊಲಿದರೆ ಅದು ಮೇಲಿನ ಜಾತಿಗೆ ಪ್ರತಿಷ್ಠೆಯ ವಿಷಯವೆನಿಸುತ್ತದೆ. ಅದು ಮೇಲಿನ ಜಾತಿಗೆ ಅವಮಾನದ ವಿಷಯವೂ ಆಗಿಬಿಡುತ್ತದೆ. ಏಕೆಂದರೆ ಅದು ವೈದಿಕ ಜಾತಿ ವ್ಯವಸ್ಥೆಯ ಪ್ರತಿಲೋಮ ವಿವಾಹ ಪದ್ಧತಿ ಎಂದೆನಿಸುತ್ತದೆ. ಅದೇ ಕೆಳಜಾತಿಯ ಹೆಣ್ಣು ಮೇಲಿನ ಜಾತಿಯ ಗಂಡಿಗೆ ಒಲಿದರೆ, ಅದರಿಂದ ಕೆಳಜಾತಿಗೆ ಅವಮಾನವೆಂದು ಭಾವಿಸುವಂತಿಲ್ಲ. ಕಾರಣ ಅದು ಮೇಲಿನ ಜಾತಿಗೆ ಅನುಕೂಲಕರವಾದ ಅನುಲೋಮ ಪದ್ಧತಿ ಎಂದೆನಿಸುತ್ತದೆ. ಆದರೆ, ಮಲ್ಲಪ್ಪನ ಮಗಳಾದ ಕಾಶಮ್ಮನ ಅಂತರ್ ಜಾತಿಯ ಸಂಬಂಧ ಇವೆಲ್ಲವನ್ನು ಮೀರಿ ಬೆಳೆದಿದೆ.

ಕಾಶಿಯಂತಹ ಹೆಣ್ಣು ಹಿಂದೂ ಸಮಾಜ ರೂಪಿಸಿಕೊಂಡಂತಹ ಜಾತಿ ವ್ಯವಸ್ಥೆಯನ್ನು ಮೀರಿ ತಾನು ಈಗಾಗಲೇ ಇಚ್ಚೆಪಟ್ಟಂತಹ ಮೇಲುಜಾತಿಯ ಲಿಂಗರಾಜನ ಬಳಿ ಬಂದು ಸೇರುತ್ತಾಳೆ. ಅದು ಕೂಡ ತಾನು ಈಗಾಗಲೇ ವಿವಾಹವಾಗಿದ್ದ ಗಂಡನನ್ನು

ತೋರೆದು. ಕಾದಂಬರಿಯಲ್ಲಿನ ಹೆಣ್ಣು ಜಾತಿ ವ್ಯವಸ್ಥೆಯಿಂದ, ಲೈಂಗಿಕ ತಾರತಮ್ಯದಿಂದ, ಹಿಂದೂ ಸಮಾಜ ರೂಪಿಸಿಕೊಂಡ ಮೌಢ್ಯದಿಂದ, ಶೋಷಣೆಗೆ ಒಳಗಾಗಿದ್ದು ಒಂದು ರೀತಿಯಲ್ಲಿ ಮೂಕವೇದನೆಗೆ ತುತ್ತಾಗಿರುವುದನ್ನು ಕಾಣುತ್ತೇವೆ.

**ಮೂಢನಂಬಿಕೆಗಳ ಸೆಳೆತದಲ್ಲಿ**

ಗೀತಾರವರು ತಮ್ಮ ಕಾದಂಬರಿಗಳಲ್ಲಿ ಹರೆಯದವರ ಸಮಸ್ಯೆಗಳು, ಅವರು ಎದುರಿಸುವ ಸಂಕಟಗಳು, ಹಟ, ಅವರು ಕಾಣುವ ಸುಂದರವಾದ ಕನಸ್ಸುಗಳ ಬಗೆಗೆ ತೆರೆದಿಡುತ್ತಾರೆ. ನಮ್ಮ ನಮ್ಮ ಮೂಢನಂಬಿಕೆಗಳಲ್ಲಿ ತಮ್ಮದೆ ಆದಂತಹ ತಪ್ಪುಗಳಿರುತ್ತವೆ ಎಂದರಿತು ಮೌಢ್ಯತೆಯನ್ನು ಬೆತ್ತಲಾಗಿಸಿದ್ದಾರೆ. ತಮ್ಮ ಅಮ್ಮನ ತವರೂರು ಚುಂಚೂರಿನ ಮಾಪುರತಾಯಿ ದೇವಿಯ ಜಾತ್ರೆಯಲ್ಲಿ ಕುರಿ ಕೋಳಿಗಳ ಬಲಿ ಇರುತ್ತಿತ್ತು. ಇದರ ಜೊತೆಗೆ ಅಲ್ಲಿ ನಡೆಯುವಂತಹ ಗಂಡು ಹೆಣ್ಣುಗಳ ಬೆತ್ತಲ ಸೇವೆಯು ಸಾಮಾನ್ಯವಾಗಿತ್ತು. ಬೆತ್ತಲ ಸೇವೆಗೆ ಹರೆಯದವರು ಮುದುಕರು ಎನ್ನುವ ತಾರತಮ್ಯವಿರಲಿಲ್ಲ. ಹೆಂಗಸರು ಗಂಡಸರು ಅನ್ನುವ ಭೇದ ಭಾವವಿರಲಿಲ್ಲ. ಹರಕೆಹೊತ್ತ ದಲಿತರು ಯಾರು ಬೇಕಾದರು ಆ ಸೇವೆಯನ್ನು ದೇವಿಗೆ ಸಲ್ಲಿಸಬಹುದಾಗಿತ್ತು.

048761

ಬದುಕು ಕಾದಂಬರಿಯಲ್ಲೂ ಕೂಡ ಹೆಣ್ಣು ಇದೇ ರೀತಿಯ ಸಂಕಟಗಳಿಗೆ ಸಿಲುಕುತ್ತಾಳೆ. ಬೆತ್ತಲೆಯಾಗುವುದು, ಸೂಳೆಗಾರಿಕೆಗೆ ಇಳಿಯುವುದು ತೀರ ಕೆಳಜಾತಿಯ ಹೊಲೆ ಮಾದಿಗರು. ಮೇಲು ಜಾತಿ ಹೆಂಗಸರ್‍ಯಾರು ಇಂತಹ ಹರಕೆ ಹೊರುತ್ತಿರಲಿಲ್ಲ. ಆ ಹರಕೆ ಸಂಪ್ರದಾಯವಾಗಿ ಬೆಳೆದು ಬಂದಿರುವುದು ಬರೀ ದಲಿತರಲ್ಲಿ ಮಾತ್ರ.

ಪುರುಷ ಪ್ರಧಾನ ಸಮಾಜದಲ್ಲಿ ಹೆಣ್ಣು ಒಂದು ಮಾರಾಟದ ವಸ್ತುವಾಗಿದ್ದಾಳೆ, ಭೋಗದ ಬೊಂಬೆಯಾಗಿದ್ದಾಳೆ. ಇವನ ಅಮಾನವೀಯ ವರ್ತನೆಗಳಿಗೆ ಸಿಲುಕಿ ಹೆಣ್ಣು ಅವನ ಗುಲಾಮಳು ಆಗಿದ್ದಾಳೆ. ಇದಕ್ಕೆ ಉತ್ತಮ ಉದಾಹರಣೆಯೆಂದರೆ ನಮ್ಮ ಸಮಾಜದಲ್ಲಿ ಇನ್ನೂ ಜೀವಂತವಿರುವ ದೇವದಾಸಿ ಪದ್ಧತಿಯಾಗಿದೆ.

ಶತಶತಮಾನಗಳಿಂದಲೂ ಕೂಡ ಹೆಣ್ಣು ಮಕ್ಕಳನ್ನು ದೇವರ ಹೆಸರಿನಲ್ಲಿ, ದೇವರಿಗಾಗಿ ಬಸವಿ ಬಿಡುವ, ಸೂಳೆ ಬಿಡುವ ಪದ್ದತಿ ವ್ಯವಸ್ಥಿತ ಬಂಧದಲ್ಲಿ ರೂಪುಗೊಂಡು ಬಂದಿದೆ. ಇದು ಬೆಳೆದು ಬಂದಿರುವ ಬಗ್ಗೆ 'ಅಂಧಶ್ರದ್ಧೆಗೆ ದೇಹ ನೀಡಿಕೆ' ಎಂಬ ಭಾಗದಲ್ಲಿ ಚರ್ಚೆಯಾಗಿರುವುದನ್ನು ಕಾಣಬಹುದು.

ಕೆಲಮೊಮ್ಮೆ ಮುಪ್ಪಿನ ಕಾಲದಲ್ಲಿ ತಮಗೆ ಮಗಳೇ ಆಶ್ರಯದಾತಳಾಗುತ್ತಾಳೆಂದು ಗಂಡು ಮಕ್ಕಳಿಲ್ಲದ ತಂದೆ ತಾಯಿಗಳು ತಮಗಿರುವ ಮಗಳನ್ನು ದೇವದಾಸಿ ಸ್ಥಾನಕ್ಕೆ ದೂಡುವುದುಂಟು, ದೇವದಾಸಿ ಪದ್ಧತಿಗೆ ಇದಿಷ್ಟೇ ಸಂಗತಿ ಕಾರಣವಲ್ಲ. ತಮ್ಮ ಮಕ್ಕಳಿಗೆ ಕಾಯಿಲೆಯಾದಾಗ, ಗುಣಪಡಿಸಲು ದೇವರ ಮೊರೆಹೋಗುವ ತಂದೆ ತಾಯಿಗಳು

ಕಾಯಿಲೆಯಿಂದ ಮುಕ್ತಳಾದ ಮಗಳನ್ನು ದೇವಿಗೆ 'ಬಸವಿ' ಬಿಡುವುದಾಗಿ ಹರಕೆ ಹೊರುವ ಅಂಧ ಭಕ್ತಿಯೂ ಕಾರಣವಾಗಿದೆ.

ಕೌಟಿಲ್ಯನು ತನ್ನ 'ಅರ್ಥಶಾಸ್ತ್ರ' ದಲ್ಲಿ ದೇವದಾಸಿ ಪದ್ಧತಿ ಸರಕಾರದ ಹಲವಾರು ವಿಭಾಗಗಳಿಂದ ಸುವ್ಯವಸ್ಥಿತಗೊಳಿಸಿವೆ ಎಂದು ತಿಳಿಸಿದ್ದಾನೆ. ದೇವದಾಸಿ ಪದ್ಧತಿ ಕೇವಲ ಭಾರತದಲ್ಲಿ ಮಾತ್ರವಿರದೇ ಸುಮೇರಿಯಾ, ಪ್ರಾಚೀನ ಈಜಿಪ್ಟ, ಪ್ರಾಚೀನ ಬ್ಯಾಬಿಲೋನಿಯಾ, ಸಿರಿಯಾ, ಇಸ್ರಾಯಿಲ್, ಪೋನೇಸಿಯಾ, ಲಿಡಿಯಾ, ಚೀನಾ, ಗ್ರೀಕ್ ಹಾಗೂ ಜಪಾನ್ ಮೊದಲಾದ ಹಲವಾರು ದೇಶಗಳಲ್ಲಿ ಈ ಪದ್ಧತಿಯು ಇರುವುದನ್ನು ಕಾಣಬಹುದಾಗಿದೆ.

ಸುಂದರವಾಗಿ ಇರುವಂತಹ ಶೂದ್ರರಾದ ಹೆಣ್ಣುಮಕ್ಕಳು ಸಂಗೀತ ನೃತ್ಯವನ್ನು ಕಲಿತು ಆ ಸೇವೆಯನ್ನು ದೇವರಿಗೆ ಅರ್ಪಿಸುವುದರ ಮೂಲಕ ಅವರು ದೇವದಾಸಿಯರಾಗುತ್ತಿದ್ದರು. ದೇವರ ಹೆಸರಿನಲ್ಲಿ ಮೊದಲು ಆರಂಭವಾದ ಈ ಪದ್ಧತಿ ಅನಂತರ ಪುರೋಹಿತರ, ಅರಸೊತ್ತಿಗೆಯವರ, ಶ್ರೀಮಂತರ ಪಾಲಾಗುತ್ತಿತ್ತು. ಒಟ್ಟಾರೆ ಹೇಳುವುದಾದರೆ ಹೆಣ್ಣನ್ನು ಬಿಡುವುದು ದೇವರಿಗೆ. ಆದರೆ ಆಕೆಯ ಅಂಗಾಂಗ ಸುಖವನ್ನು ಅನುಭವಿಸುವುದು ಮಾತ್ರ ದುಷ್ಟಕೂಟದ ಸಿರಿವಂತ ವ್ಯಕ್ತಿಗಳು. ಇಂತಹ ವ್ಯಕ್ತಿಗಳು ಅಮಾಯಕ ದಲಿತ ಹೆಣ್ಣುಮಕ್ಕಳಿಗೆ ದೇವದಾಸಿಯಂತಹ ಪದ್ಧತಿ ದೇವರ ಪವಿತ್ರ ಸೇವೆಯನ್ನು ಮಾಡುವ ಪುಣ್ಯದ ಕೆಲಸವೆಂದು ಹೇಳಿ ನಂಬಿಸುತ್ತಿದ್ದರು. ಆಕೆ ಮಾಡುತ್ತಿದ್ದ ಇಂತಹ ಕೆಟ್ಟ ಕೆಲಸಕ್ಕೆ ಸಮಾಜದಲ್ಲಿ ಒಂದು ಗೌರವ, ಮನ್ನಣೆ ಸಿಗುವಂತೆ ಸಾಮಾಜಿಕ ವ್ಯವಸ್ಥೆಯನ್ನು ಭದ್ರಪಡಿಸಿದ್ದು ದುಷ್ಟ ಶ್ರೀಮಂತ ವ್ಯಕ್ತಿಗಳು.

ಭಾರತದಲ್ಲಿ ದತ್ತ, ವಿಕೃತ, ಬ್ರತ್ಯಾ, ಭಕ್ತ, ಹೃತಾ, ಅಲಂಕಾರ ಗೋಪಿಕ ಹೀಗೆ ಏಳು ರೀತಿಯ ದೇವದಾಸಿಯರನ್ನು ಕಾಣಬಹುದು. ಕರ್ನಾಟಕದಲ್ಲೂ ಈ ಪದ್ಧತಿ ಸುಮಾರು ಒಂಬತ್ತನೆಯ ಶತಮಾನದಿಂದಲೇ ಇರುವುದಕ್ಕೆ ದಾಖಲೆಗಳು ದೊರಕುತ್ತವೆ. ಕರ್ನಾಟಕದಲ್ಲಿ ಮುಖ್ಯವಾಗಿ ಬೇಡ, ಬೋಯಾ ಮತ್ತು ಹರಿಜನ ಜಾತಿಯಲ್ಲಿ ಈ ಪದ್ಧತಿ ಇರುವುದು ಕಂಡುಬರುತ್ತದೆ. ಈ ಜನಾಂಗದಲ್ಲಿ ಗಂಡು ಸಂತಾನವಿಲ್ಲದವರು ಬಸವಿ ಬಿಟ್ಟು ಅಥವಾ ದೇವದಾಸಿ ಪದ್ಧತಿಗೆ ಒಳಪಡಿಸಿ ಹೆಣ್ಣು ಮಕ್ಕಳನ್ನು ತಮ್ಮ ಮನೆಯಲ್ಲೇ ಇಟ್ಟುಕೊಳ್ಳುವರು.[೬]

ಉತ್ತರ ಕರ್ನಾಟಕದಲ್ಲಿ ಕಂಡು ಬರುವ ಹಾಗೆ ಹೊಲೆ ಮಾದಿಗರು, ಕಾಟಕ ಕಬ್ಬಲಿಗರು, ಕುರುಬರು, ತಳವಾರ ಬ್ಯಾಡರು, ಗೊಲ್ಲರು ಹೀಗೆ ಹದಿನೆಂಟು ತರಹದ ಶೂದ್ರರು ಜೋಗಣಿಗೆ ಒಳಗಾಗುವುದನ್ನು ಕಾಣಬಹುದು. ಮಾಪುರ ತಾಯಿಯ ಜಾತ್ರೆಯ ಸಂದರ್ಭದಲ್ಲಿ ಚುಂಚೂರಿಗೆ ಬರುತ್ತಾರೆ. ಈ ದೇವಿಯ ವಿಗ್ರಹವು ಹೇಗಿದೆ ಎಂದರೆ ಬನ್ನಿ

೬. ಡಾ.ಕಮಲಾ ಹಂಪನಾ–ವೈಚಾರಿಕ ಪ್ರಬಂಧಗಳು : ಪುಟ ಸಂಖ್ಯೆ–೧೦೧.ಸಪ್ನ ಬುಕ್ ಹೌಸ್–೨೦೧೧

ಗಿಡದ ಕೆಳಗಡೆ ಅದರ ಬೊಡ್ಡೆ ಸೇರಿಕೊಂಡು ಒಂದು ದೊಡ್ಡ ಕಟ್ಟೆಗೆಯ ಗೊಂಬೆಯ ಮಾಪುರದೇವಿ ಈ ಗಿಡವನ್ನು ಒಳಗೆ ಮಾಡಿಕೊಂಡೇ ಸುತ್ತಮುತ್ತ ಗುಡಿಯನ್ನು ನಿರ್ಮಿಸಿರುತ್ತಾರೆ.

ಗಂಧದ ಹುಟಗಿಯ ಹೆಸರಿನಲ್ಲಿ ಬರಿ ಬೆತ್ತಲೆಯಾಗಿ ಗುಡಿ ಸುತ್ತುವುದು, ಬೇವಿನ ಹುಟಗಿಯೆಂದು ಮೈತುಂಬ ಬೇವಿನ ತೊಪ್ಪಲು ಸುತ್ತಿಕೊಂಡು ದೇವಿಯ ಗುಡಿಗೆ ಪ್ರದಕ್ಷಿಣೆ ಹಾಕುವುದು, ತಲೆಯ ಮೇಲೆ ತಣಾರ್ತಿ ಹೊರುವುದು 'ಜೋಗಿಣಿ' ಯಾಗುವುದರ ಲಕ್ಷಣವಾಗಿದೆ.

ಗಂಧದ ಹುಟಗಿ ಉಟ್ಟು ಬೆತ್ತಲೆಯಾಗುವ ಗಂಡು ಹೆಣ್ಣುಗಳು ನೆತ್ತಿಯ ಮೇಲೆ ಉರಿಯುವ ಸಾಡ್ದಾರತಿಯ ತಾಂಬಡಿ ಹೊತ್ತು, ಬಾಯಲ್ಲಿ ಬೇವಿನ ಪಳ್ಳೆ ಕಚ್ಚಿಕೊಂಡು ಹರಕೆ ಹೊತ್ತವರು ಬರಿಗಾಲಿನಿಂದ ದೇವಿಯ ಗುಡಿ ಸುತ್ತುತ್ತಿದ್ದರು. ಅವರ ಮುಂದೆ ಬಲಿ ಕೊಡುವ ಕುರಿ ಸಿಂಗಾರವಾಗಿ ಓಡುತ್ತಿತ್ತು. ಅದರ ಮುಂದೆ ಹಲಗೆ, ಬಾಜಿ, ಡೊಳ್ಳು, ಭಜಂತ್ರಿಗಳ ಆವಾಜು. ಕುರಿಯ ಹಿಂದೆ ಹರಕೆ ಹೊತ್ತ ಹೆಂಗಸು ಅಥವಾ ಗಂಡಸು ಅವಳ ಹಿಂದೆ ಬಂಧು ಬಳಗದವರು ಉಧೋ.. ಉಧೋ.. ಅಂತ ಒದರುತ್ತ ಓಡುತ್ತಿದ್ದರು. ಹೀಗೆ ಮೈಮೇಲೆ ಖಬರಿಲ್ಲದಂತೆ ಬಾಯಲ್ಲಿ ತೊಪ್ಪಲು ಕಚ್ಚಿಕೊಂಡು, ಕಾಡಿನಿಂದ ತಪ್ಪಿಸಿಕೊಂಡ ಮೃಗಗಳಂತೆ ಓಡಿ ಬರುತ್ತಿದ್ದರು.[೬] ಜಾತ್ರೆ ನೋಡಲು ಬಂದು ಸುತ್ತ ನಿಂತ ಜನರಿಗೆ ಪುಕ್ಕಟೆ ಮನರಂಜನೆ ಸಿಗುತ್ತಿತ್ತು. ಇದು ಒಂದು ಸಾಮಾಜಿಕ ಪದ್ಧತಿಯಾಗಿ ಬೆಳೆದು ಬರುತ್ತಿದ್ದು ಇದನ್ನು ಪ್ರಶ್ನಿಸುವ ಮನಸ್ಸುಗಳು ಇಲ್ಲವಾಗಿದೆ. ಜೋಗಿಣಿಯಾದ ಅವಳ ಜೀವನ ಮುಂದೆ ಏನು? ಎನ್ನುವ ಪ್ರಶ್ನೆಯನ್ನು ಯಾರು ಮಾಡುವುದಿಲ್ಲ. ಆಡಂಬರತೆಯಿಂದ ಅಚಿದವಾಗಿ ಕುರಿಗೆ ಅಲಂಕಾರ ಮಾಡಿ ಕೊನೆಗೆ ಅದನ್ನು ಬಲಿ ನೀಡುವ ರೀತಿಯಾಗಿ ಹೆಣ್ಣನ್ನು ನಡೆಸಿಕೊಳ್ಳಲಾಗುತ್ತಿದೆ.

ಬದುಕು ಕ್ಥದಂಬರಿಯಲ್ಲಿ ಇಚಿತಹ ಹೆಣ್ಣು ಮಕ್ಕಳು ಸಾಕಷ್ಟಿರುವುದನ್ನು ಕಾಣಬಹುದಾಗಿದೆ. ಅವರ ಹರೆಯದ ಮೈಕಟ್ಟಿನ ಅಚಿದ ಚೆಂದ ಇರುವ ತನಕ ಅವರು ಸೂಳೆಗಾರಿಕೆ ಮಾಡುತ್ತಾ ಸಂಪಾದಿಸಿ ತಿನ್ನುತ್ತಾರೆ. ಮುಪ್ಪಿನ ಕಾಲದಲ್ಲಿ ಅವರು ಯಾರ ಆಶ್ರಯದಲ್ಲಿ ಇರಬೇಕು ಯಾರು ಅವರನ್ನು ಸಾಕುತ್ತಾರೆ ಎಂಬುದು ಗೊತ್ತಿಲ್ಲದ ಯಕ್ಷ ಪ್ರಶ್ನೆಯಾಗಿದೆ.

'ಜೋಗಣಿ' ಅಚಿದರೆ ಮಾಪುರ ತಾಯಿಚು ಸೇವೆಗೆ ಪೂರಾ ಮೀಸಲಾದ ಹೆಣ್ಣು ಅವಳು ಸಾಯುವ ತನಕವೂ ಬೇರೆ ಮದುವೆಯಾಗುವ ಹಾಗೆ ಇರಲಿಲ್ಲ. 'ಪಟ್ಟಕ್ಕೆ' ಹಾಕಿಕೊಂಡ ಗೌಡನೋ, ಕುಲಕರ್ಣಿಯೋ, ಸಾವ್ಕಾರನೊ ಅವಳಿಗೆ 'ಪಟ್ಟ'ದ ಖರ್ಚು

---

೬. ಉಷಾ.ಪಿ.ರೈ.; ಕೆ.ಎಂ.ವಿಜಯಲಕ್ಷ್ಮೀ : ಲೇಖಲೋಕ-೪ : ಪುಟಸಂಖ್ಯೆ:೪೨

ದೊಡ್ಡ ಮೊತ್ತದ ಹಣ, ಜರತಾರಿಯ ರೇಶ್ಮೆ ಸೀರೆ, ಕುಪ್ಪಸ, ಬಂಗಾರದ ವಡವೆ ವಸ್ತ್ರ, ತಾಳಿ ಸಾಮಾನು, ಹಸುರುಬಳೆ, ಕಾಲುಂಗುರ ಮೊದಲಾದ ವಸ್ತುಗಳನ್ನು ಕೊಡುತ್ತಾನೆ.

ಜೋಗಿಣಿಯಾಗುವ ಹೆಣ್ಣಿಗೆ ಸುರಿಗೆಸುತ್ತಿ ಮೀಯಿಸಿ, ಅವಳ ಎಡಕ್ಕೆ ಒಂದು ತಲವಾರು (ಕತ್ತಿ) ಇಟ್ಟು ಅದನ್ನೇ ಗಂಡನೆಂದು ಸಿಂಗರಿಸಿ ಅದರೊಂದಿಗೆ ಅವಳ ಮದುವೆಯ 'ಚಾಜ' ಗಳೆಲ್ಲ ಮಾಡಿ ತಾಳಿ ಕಟ್ಟುತ್ತಾರೆ. ತಲೆಯ ಮೇಲೆ ಬಿದಿರ ಬುಟ್ಟಿಯಂತಹ 'ಪರತ' ಹೊರಿಸುತ್ತಾರೆ. ಬಗಲಲ್ಲಿ ಚೌಡಕಿ ಕಟ್ಟುತ್ತಾರೆ. ಅಲ್ಲಿಗೆ ಆಕೆಯ ಕಥೆ ಮುಗಿಯಿತು. ಅಂದಿನಿಂದ ಅವಳು ಚುಂಚೂರು ಮಾಪುರ ತಾಯಿಯ ಜೋಗಣಿಯಾಗುತ್ತಾಳೆ. ಅಂದು ರಾತ್ರಿ ಪಟ್ಟಕ್ಕೆ ಹಾಕಿಕೊಂಡವನು ಅವಳ ಮೈಯ ಮೀಸಲು ಮುರಿದು, ಕನ್ಯತನ ಕಳೆದು ಅವಳನ್ನು 'ಹೆಣ್ಣು' ಮಾಡುತ್ತಾನೆ ಅಷ್ಟೇ. ಮುಂದೆಲ್ಲ ಅವಳು ದೇವಿಯ ಹೆಸರಿನ ಮೇಲೆ ಬಂದ ಗಂಡಸರಿಗೆಲ್ಲ ಸೆರಗು ಹಾಸುತ್ತಾ ಅವರ ಮಗ್ಗಲು ಬಿಸಿ ಮಾಡುತ್ತ ಅವರ ಕಾಮದ ತಿಂಡಿಗೆ ಬಲಿಯಾಗುತ್ತಾ ದಿನಗಳೆಯಬೇಕು. ಅವಳಿಗೆ ಹುಟ್ಟುವ ಮಕ್ಕಳಿಗೆ ತಂದೆಯ ಹೆಸರಿಲ್ಲ. ತಾಯಿಯದೇ ಹೆಸರು. ಅವಳು ಅಧಿಕೃತವಾಗಿ ಸೂಳೆಯಾಗುತ್ತಾಳಷ್ಟೇ. ದಂಧೆ ಅದೇ. ಹೆಸರು ಮಾತ್ರ ಸೂಳೆಯಲ್ಲ 'ಜೋಗಣಿ'[೭].

'ಬದುಕು' ಕಾದಂಬರಿಯಲ್ಲಿ ಮಹಿಳಾ ಶೋಷಣೆಯ ನಾನಾ ಪದರಗಳನ್ನು ಬಿಚ್ಚಿ ತೋರಿದ್ದಾರೆ. ಅತ್ಯಂತ ಕೆಳಸ್ತರದ ಸ್ತ್ರೀಯರ ಬದುಕಿನ ಸಮಸ್ಯೆ, ಬವಣೆಗಳನ್ನು ತೆರೆದಿಡುವ ಸಾಮಾಜಿಕ ಬದ್ಧತೆಯನ್ನು ತೋರಿದ್ದಾರೆ. ಮೂಢನಂಬಿಕೆಗಳ ಸೆಳೆತಕ್ಕೆ ಸಿಕ್ಕಿದ ಹೆಣ್ಣಿನ ಗೋಳಿನ ದನಿಯನ್ನು ಮೂಡಿಸುತ್ತಾ ಬಂದಿದ್ದಾರೆ. ಕಾದಂಬರಿಯ ಕಥಾ ನಾಯಕನ ರೀತಿ ತೋರುವ ಜಮಾದಾರ ಮಲ್ಲಪ್ಪ ಅವರ ಕೆಳಗೇರಿಯಲ್ಲಿ ಗೌರವಯುತ ವ್ಯಕ್ತಿಯಾಗಿದ್ದ. ಅವನ ದೊಡ್ಡಿಯಲ್ಲಿ ಭರಮ್ಯಾ ಎನ್ನುವ ಕೆಲಸದಾಳು ಅವರ ಮನೆ ಕೆಲಸವನ್ನು ಮಾಡುತ್ತಿರುತ್ತಾನೆ. ಭರಮ್ಯಾನಿಗೆ ಕಾಯಿಲೆ ಬಂದು ಹಾಸಿಗೆ ಹಿಡಿದಾಗ ಬಹಳ ದಿನಗಳವರೆಗೆ ಆರೋಗ್ಯ ಸುಧಾರಿಸಿರುವುದಿಲ್ಲ. ಮಾಪುರತಾಯಿ ಪುಜಾರಪ್ಪನ ಮೈಯ ಮೇಲೆ ಬಂದು ನಿನ್ನ ಮಗಳನ್ನು ನನ್ನ ಸೇವೆ ಮಾಡಲು ಬಿಡು ಅಂದರೆ ಆಕೆಯನ್ನು ಜೋಗಣಿ ಮಾಡು ಎಂದು ಪೂಜಾರಪ್ಪನ ಮೂಲಕ ದೇವಿ ಹೇಳಿಸುತ್ತಾಳೆ. ಆಕೆಯನ್ನು ಜೋಗಣಿ ಮಾಡದಿದ್ದರೆ ನಿನ್ನನ್ನು ಉಗಳಿ ಬಿಟಾಕ್ತೀನಿ, ಬಾಳೆಯ ಹಣ್ಣನ್ನು ನುಂಗಿದ ಹಾಗೆ ನುಂಗಿ ಬಿಡುತ್ತೇನೆ, ನಿಮ್ಮ ಮನೆಯಲ್ಲಿ ಎಲ್ಲರೂ ಸಾಯುವ ಹಾಗೆ ಮಾಡಿ ರಕ್ತದ ಹೊಳೆಯನ್ನೇ ಹರಿಸುತ್ತೇನೆ ಎಂದು ದೇವಿ ಪೂಜಾರಪ್ಪನ ಬಾಯಿಯಲ್ಲಿ ಹೇಳಿಸುವ ಮಾತುಗಳು ಭರಮ್ಯಾನಲ್ಲಿ ಭಯವನ್ನು ಹುಟ್ಟು ಹಾಕುತ್ತದೆ.

ಮಾಪುರ ತಾಯಿಯು ಕೂಡ ಒಂದು ಹೆಣ್ಣೇ ಆಗಿದ್ದು ಹೆಣ್ಣುದೇವತೆ ಆ ರೀತಿಯಾಗಿ ಕೇಳುತ್ತಾಳೆಯೇ ಎಂದು ಯೋಚಿಸುವುದಿಲ್ಲ. ಪೂಜಾರಪ್ಪ ದೇವಿಯ ಪರವಾಗಿ ಹೇಳುವ

---

೭ ಗೀತಾನಾಗಭೂಷಣ : ಬದುಕು:ಪುಟಸಂಖ್ಯೆ:೪೬ : ಲೋಹಿಯಾ ಪ್ರಕಾಶನ :೨೦೦೧

ಮಾತುಗಳಲ್ಲಿ ಸುಳ್ಳು ಯಾವುದು, ಸತ್ಯ ಯಾವುದು ಎಂದೂ ಕೂಡ ತಾರ್ಕಿಕವಾಗಿ ಆಲೋಚನೆ ಮಾಡುವುದಕ್ಕೆ ಭರಮ್ಯಾನಿಗೆ ಸಾಧ್ಯವಾಗುವುದಿಲ್ಲ.

ಪೂಜಾರಪ್ಪನ ಮಾತುಗಳಿಗೆ ಒಪ್ಪಿದ ಗಂಡ ಹೆಂಡತಿ ಇಬ್ಬರೂ ತಮ್ಮ ಮಗಳು ನೀಲವ್ವನನ್ನು ದೇವಿಯ ಸೇವೆಗೆ ಬಿಡುತ್ತಾರೆ. ಯೌವ್ವನಕ್ಕೆ ಬಂದಿರದ ನೀಲವ್ವನಿಗೆ ಇದ್ಯಾವುದರ ಪರಿವೆಯು ಇರುವುದಿಲ್ಲ. ಮೈನೆರೆದ ಮೂರು ತಿಂಗಳಿಗೆಲ್ಲಾ ಪುಜಾರಪ್ಪನಿಂದ ಜೋಗಣಿಯಾಗಲು ಹುಕುಂ ಬರುತ್ತದೆ. ಇನ್ನು ಮೈ ಬೆಳೆಯದ ನೀಲವ್ವನನ್ನು ಮುಂದಿನ ವರ್ಷ 'ಜೋಗಿಣಿ' ಮಾಡುತ್ತೇವೆ ಎಂದು ಪರಿಪರಿಯಾಗಿ ಬೇಡಿಕೊಂಡರು ಪೂಜಾರಪ್ಪ ಇವರ ಮಾತುಗಳಿಗೆ ಕವಡೆ ಕಾಸಿನ ಕಿಮ್ಮತ್ತು ಕೊಡುವುದಿಲ್ಲ. ಗಂಡ ಹೆಂಡತಿಯಲ್ಲಿ ಮತ್ತಷ್ಟು ಭಯವನ್ನು ಹುಟ್ಟುಹಾಕುತ್ತಾನೆ. ಇದರ ಹಿಂದೆ ನರೋಣಾದ ಗೌಡನ ಮಗನ ಹಣದ ಪ್ರಭಾವವಿದೆ ಎಂಬುದರ ಸುಳಿವು ಕೂಡ ಈ ದಂಪತಿಗಳಿಗೆ ತಟ್ಟುವುದೇ ಇಲ್ಲ. ಬದುಕಿ ಬಾಳಿ ಗಂಡ, ಮಕ್ಕಳು, ಸಂಸಾರ ಎಂದು ಸುಂದರವಾಗಿ ಕನಸು ಕಾಣಬೇಕಾದ ಮಗುವಿನ ಬಾಳನ್ನು ನರಕಕ್ಕೆ ನೂಕುತ್ತಾರೆ ಇವರು.

ಪೂಜಾರಿಯ ಮಾತುಗಳು ದೇವರ ಮಾತುಗಳ ರೀತಿ ಗತ್ತಿನಿಂದ ಬರುವ ಮಾತುಗಳಾಗಿವೆ. "ನೀ ಹರಕಿ ಹೇಳ್ಕೊಂಡಂಗ ನಡೀಲಿಲ್ಲಂದ್ರ ಆ ದೇವಿ ನಿನ್ನ ಸಂಸಾರೆಲ್ಲಾ ನಾಸ ಮಾಡಿಬಿಡ್ತಾಳ ನಿನ್ ವಂಸ ನಿರ್ವಂಸ ಮಾಡ್ತಾಳ. ನಿನ್ನ ಮೀಸಿ ಬೋಳ್ಸಿ, ನಿನ್ ಗಂಡಸ್ತನ ಕಳ್ದು ನಿನಗ ಸೀರಿ ಉಡ್ಸಿ, ಹಸರ ಬಳಿ ತೊಡ್ಸಿ ನೆತ್ತಿ ಮ್ಯಾಲ ಪರಚಿ ಹೊರಸ್ತಾಳ ನೋಡು ಹುಷಾರ್"[೮] ಎಂದು ಧಮಕಿ ಹಾಕುತ್ತಾನೆ. ಇದಕ್ಕೆ ಹೆದರಿದ ಭರಮ್ಯಾ ಮತ್ತು ಮರಗಿ ಬೇಗನೆ ತಮ್ಮ ಮಗಳನ್ನು 'ಜೋಗಣಿ' ಮಾಡುವುದನ್ನು ಕಾಣುತ್ತೇವೆ. ಇದು ಒಂದು ರೀತಿಯಲ್ಲಿ ಪೂಜಾರಿಯ ಕುತಂತ್ರ, ನರೋಣಾದ ಗೌಡನ ಮಗನ ಹಣದ ಪ್ರಭಾವಗಳು ಧಾರ್ಮಿಕವಾಗಿ ಹೆಣ್ಣನ್ನು ಶೋಷಣೆ ಮಾಡುವುದಕ್ಕೆ ಸಾಧ್ಯವಾಗುತ್ತವೆ ಎಂದೇ ಭಾವಿಸಬಹುದು.

ಧಾರ್ಮಿಕ ಆವರಣದಲ್ಲಿಯೇ ಹೆಣ್ಣನ್ನು ಲೈಂಗಿಕ ಕಿರು ಕುಳಕ್ಕೆ ಒಡ್ಡುವ ಒಂದು ಪಿತೂರಿ. ಎಂಬುದನ್ನು ಅರಿಯದ ಮಗ್ಧ ಜನರು ಇವರಾಗಿದ್ದು. ಇವರ ಅಮಾಯಕ ಮುಗ್ಧತನವನ್ನು ತಮ್ಮ ಲೈಂಗಿಕ ಸ್ವಾರ್ಥ ತನಕ್ಕೆ ಬಳಸಿಕೊಂಡು ಧಾರ್ಮಿಕವಾಗಿ ಹಾಗೂ ಸಾಮಾಜಿಕವಾಗಿ ಶೋಷಣೆ ಮಾಡುತ್ತಿರುವುದನ್ನು ಇಲ್ಲಿ ಕಾಣುತ್ತೇವೆ.

"ಗಂಡಾನ ಹೆಸರಿಲ್ಲ ಊರೆಲ್ಲ ಮಿಂಡಾರು
ಮದುವಿಲ್ದೆ ಮದುಮಗಳು ಗಂಡಿಲ್ದೆ ಹಡೆದೊಳು
ನಾಯಿಗೂ ಕಡೆಯಾಗಿ ಕೀಳಾಯ್ತು ನನ್ನ ಬಾಳು

---

೮. ಗೀತಾನಾಗಭೂಷಣ : ಬದುಕು:ಪುಟಸಂಖ್ಯೆ:೫೯ : ಲೋಹಿಯಾ ಪ್ರಕಾಶನ ೨೦೦೧

ಯಲ್ಲವ್ವನ ಹಿಂದೆ ಹೋಗಿ ಎಲ್ಲಾನೂ ಕಳಕೊಂಡೆ
ಊಧೋ ಊಧೋ ಅನುತ್ತಾ ಉದುರಿದಾ ಹೂವಾದೆ......"[೯]

ಎಂದು ದೇವದಾಸಿಯರ ಗೋಳನ್ನು ಈ ಕವನದ ಮೂಲಕ ಹೇಳುತ್ತಿದ್ದಾರೆ.

ದೇವದಾಸಿಯರೆಂದರೆ ದೇವಸ್ಥಾನಗಳಿಗೆ ತಮ್ಮನ್ನು ತಾವು ಅರ್ಪಿಸಿಕೊಂಡಿರುತ್ತಾರೆ. ಇವರು ದೇವರನ್ನು ಮದುವೆಯಾಗುವುದರಿಂದ ಯಾವ ಗಂಡಸು ಕೂಡ ಮುಂದೆ ಇವರನ್ನು ಮದುವೆಯಾಗುವುದಿಲ್ಲ. ಆದರೆ ಲೈಂಗಿಕ ತೃಪ್ತಿಯನ್ನು ಮಾತ್ರ ಅನುಭವಿಸುತ್ತಾನೆ. ದೇವಸ್ಥಾನಗಳಲ್ಲಿ ದೇವರಿಗೆ ಆನಂದ ಉಂಟಾಗುವ ಹಾಗೆ ನರ್ತನ ಮಾಡಬೇಕು, ಹಾಡಬೇಕು. ಈ ರೀತಿ ಜೀವನ ಸಾಗಿಸುವ ದೇವತೆಯರನ್ನು ಭೋಗಿಸುವವರು ಮಾತ್ರ ಭೂಲೋಕದ ದೇವರುಗಳೇ ಆಗಿರುತ್ತಾರೆ. ಅವರುಗಳೆಂದರೆ ಪುರೋಹಿತರು, ಅರ್ಚಕರು, ಜಮೀನುದಾರರು ಮತ್ತು ಶ್ರೀಮಂತರು ಎನ್ನುವುದನ್ನು ಕಾದಂಬರಿ ದಾಖಲಿಸುವುದರ ಮೂಲಕ ಒಂದು ಪ್ರದೇಶದಲ್ಲಿ ಅನುಭವಿಸುತ್ತಿರಬಹುದಾದ ಹೆಣ್ಣಿನ ಧಾರ್ಮಿಕ ಶೋಷಣೆಯನ್ನು ಸ್ಪಷ್ಟಪಡಿಸುತ್ತದೆ.

ಇಂತಹ ಸಂಪ್ರದಾಯ ಹಿಡಿಸದ ನೀಲವ್ವ "ನಾ ಒಲ್ಲೆಪ್ಪೋ.... ನಾ ಜೋಗಣಿ ಆಗಂಗಿಲ್ಲೋ ಯಪ್ಪಾ.... ನಾನು ಬ್ಯಾರೆ ಹೆಂಗಸರಂಗ ಮದಿ ಮಾಡ್ಕೊಂಡು ಒಬ್ಬ ಗಂಡನ ಹೆಣ್ತ್ಯಾಗಿ ಗರತ್ಯಾಗಿ ಬಾಳ್ಯಾ ಮಾಡ್ತೀನೋ ಯಪ್ಪಾ... ನಾ ದೇವರ ಹೆಸರಿನ ಮ್ಯಾಲ ಸೂಳಿ ದಂಧಾ ಮಾಡಂಗಿಲ್ಲೋ ಯವ್ವಾ... ನನಗಿದೆಲ್ಲಾ ಪಸಂದಿಲ್ಲೇ ಹಡದವ್ವಾ.." ಎಂದು ಅತ್ತು ಕರೆದು ಬ್ಯಾಡಪ್ಪೋ.. ಅಂತ ಕರಳು ಕರಗುವಂತೆ ನೆಲದ ಮೇಲೆ ಬಿದ್ದು ಹೊರಳಾಡಿದರೂ, ಕೈಯನ್ನು ಜೋಡಿಸಿ ಬೇಡಿಕೊಂಡರೂ ಬಿಡದೆ ಹರಕೆಯಂತೆ ಅವಳನ್ನು ಪಟ್ಟಕ್ಕೆ ಹಾಕಿ ಜೋಗಣಿ ಮಾಡುವುದನ್ನು ಕಾಣುತ್ತೇವೆ.

ನೀಲವ್ವ ಮತ್ತು ಅವರದೇ ಜಾತಿಯ ತುಕಾರಾಮನು ಪರಸ್ಪರ ಒಬ್ಬರನ್ನೊಬ್ಬರು ಪ್ರೀತಿಸುತ್ತಿದ್ದರು. ಬೇರೆಯ ಊರಿಗೆ ಓಡಿ ಹೋಗಿ ಮದುವೆಯನ್ನು ಮಾಡಿಕೊಂಡು ಗಂಡ ಹೆಂಡತಿಯಾಗಿ ಅಲ್ಲಿಯೇ ನೆಲೆಸಿ ಸಂಸಾರವನ್ನು ಹೂಡಬೇಕೆಂದು ಯೋಜನೆಗಳನ್ನು ರೂಪಿಸಿಕೊಂಡಿದ್ದರು. ಆದರೆ ಇದ್ಯಾವುದು ಫಲಿಸದೆ ನೀಲವ್ವನು 'ಜೋಗಿಣಿ' ಯಾಗಿ ತುಕಾರಾಮನ ಬಳಿ ಬಂದಾಗ ನೀನು ಕೆಟ್ಟ ಹೆಣ್ಣು ನಿನ್ನನ್ನು ನಾನು ಮದುವೆಯಾಗುವುದಿಲ್ಲವೆಂದು ಅವಳನ್ನು ತಿರಸ್ಕರಿಸುತ್ತಾನೆ. ಇದು ಅವನಿಗೆ ಅನಿವಾರ್ಯವೂ ಇತ್ತೂ ಕೂಡ. ಜೋಗಿಣಿಯಾದವರನ್ನು ಮದುವೆಯಾಗುವ ಹಾಗೇ ಇರಲಿಲ್ಲ.

---

೯. ಹಾಲತಿ ಸೋಮಶೇಖರ್: ಮಹಿಳಾ ಚಳುವಳಿ ಸಾಮಾಜಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆ ಪುಟ ಸಂಖ್ಯೆ-೧೬೧ ವಿಸ್ಮಯ ಪ್ರಕಾಶನ – ೨೦೦೭.

ಜೋಗಿಣಿಯಾದವರನ್ನು ಮದುವೆಯಾದರೆ ಮದುವೆಯಾದ ಗಂಡಸು ಸಾಯುತ್ತಾನೆ ಎಂಬ ಪ್ರತೀತಿ ಇತ್ತು. ಇದನ್ನು ಹಬ್ಬಿಸಿದವನೂ ಕೂಡ ಪೂಜಾರಿಯೇ. ತನಗೆ ಮೈಮೇಲೆ ದೇವರ ಸವಾರಿ ಬಂದಾಗ 'ಜೋಗಿಣಿ ಮದುವೆಯಾದರೆ ಹೆಂಗಸರ ಕುತ್ತಿಗೆಯನ್ನು ಹಿಸುಕಿ ಕೊಲ್ಲುತ್ತಾಳೆ, ಗಂಡಸರ ಗಂಡಸ್ತನವನ್ನು ಕಳೆದು ಅವರಿಗೆ ಸೀರೆ ಉಡಿಸಿ ಅವರನ್ನು ಜೋಗ ಬೇಡಲು ಬಿಡುತ್ತಾಳೆ, ರಕ್ತದ ಹೊಳೆಯನ್ನು ಹರಿಸುತ್ತಾಳೆ' ಎಂದು ಹೇಳುತ್ತಿದ್ದ ಮಾತುಗಳು ತುಕಾರಾಮನ ಅಧೈರ್ಯಕ್ಕೆ ಕಾರಣವಾಗಿ ನೀಲವ್ವನನ್ನು ಮದುವೆಯಾಗುವುದಕ್ಕೆ ತಿರಸ್ಕಾರ ಸೂಚಿಸುತ್ತಾನೆ.

ನೀಲವ್ವನ ಗೋಳಾಟ, ನರಳಾಟಕ್ಕೆ ಯಾರೊಬ್ಬರು ಕಿಮ್ಮತ್ತು ಕೊಡುವುದಿಲ್ಲ. ತನ್ನನ್ನು ಪ್ರೀತಿಸಿದ ತುಕಾರಾಮನು ತನ್ನಿಂದ ದೂರವಾಗಿದ್ದ. ಜೋಗಿಣಿಯಾಗಿ ಬಿಕ್ಷೆ ಬೇಡಿ ತಿನ್ನುವುದು, ಕಂಡ ಕಂಡ ಗಂಡಸರಿಗೆ ಸೆರಗನ್ನು ಹಾಸುವ ಜೀವನ ಇಷ್ಟವಾಗದ ಈಕೆ ಬಾವಿಗೆ ಬಿದ್ದು ತನ್ನ ಪ್ರಾಣವನ್ನು ಕಳೆದುಕೊಳ್ಳುತ್ತಾಳೆ. ಪ್ರಪಂಚವನ್ನೇ ಕಾಣದ ಸುಂದರ ಮುಗ್ಧ ಹೆಣ್ಣು ಮಗುವು ಈ ರೀತಿಯಾಗಿ ತನ್ನ ಜೀವನವನ್ನು ಅಂತ್ಯಗೊಳಿಸಿಕೊಳ್ಳುತ್ತಾಳೆ. ಇಂತಹ ಸ್ಥಿತಿಯಲ್ಲಿ ಮಗಳ ಸಾವಿನಿಂದ ಕಂಗಾಲಾದ ಮರಗಿ ಮತ್ತು ಭರಮ್ಯಾ ಬಾಯಿ ಬಾಯಿ ಬಡಿದುಕೊಂಡು ಅಸಹಾಯಕರಾಗುವುದನ್ನು ಕಾದಂಬರಿ ದಾಖಲಿಸುತ್ತದೆ.

ಮರಗಿಯಂತೂ ನೀಲವ್ವನ ಹೆಣದ ಮೇಲೆ ಬಿದ್ದು ಹೊರಳಾಡುತ್ತಾಳೆ. ಮಗಳ ಗದ್ದವನ್ನು, ತುಟಿಯನ್ನು ಸವರುತ್ತಾಳೆ. ಹುಚ್ಚಿಯ ಹಾಗೆ ಅವಳ ಮುಖದ ತುಂಬ ಮುತ್ತುಗಳನ್ನು ಇಡುತ್ತಾಳೆ. ತನ್ನ ತಲೆಯ ತುರುಬು ಬಿಚ್ಚಿ ಕೂದಲೆಲ್ಲಾ ಚೆಲ್ಲಾಪಿಲ್ಲಿಯಾಗಿ ಹರಡಿದ್ದರೂ ಮೈ ಮೇಲಿನ ಸೆರಗು ಜಾರಿ ಬಿದ್ದಿದ್ದರೂ, ಅದರ ಕಡೆ ಅರಿವೆಯೆ ಇರುವುದಿಲ್ಲ. ತನ್ನ ಎರಡೂ ಕೈಗಳಿಂದಲೂ ಎದೆಯನ್ನು ಬಡಿದುಕೊಂಡು, ನೆಲಕ್ಕೆ ಹಣೆ ಬಡಿದು ದುಃಖದಿಂದ ಗೋಳಾಡಿ ಅಳುತ್ತಾಳೆ. ಭರಮ್ಯಾನು ಕೂಡ ಎದೆ ಎದೆ ಬಡಿದುಕೊಂಡು ಅಬ್ಬರಿಸಿ ಅಳುತ್ತಾನೆ. ಯಾರು ಸತ್ತರೂ ಕೆಟ್ಟರೂ ಇವರ ಗೋಳಾಟವನ್ನು ಕೇಳಿ ಹೋದ ಜೀವವಂತೂ ಮತ್ತೆ ಬರುವುದಿಲ್ಲವೆಂಬುದು ಸತ್ಯ. ಈ ರೀತಿ ಜೋಗಿಣಿಯಾಗಿ ಮೊದಲ ಬಲಿಯಾದದ್ದು ನೀಲವ್ವ.

ದೇವದಾಸಿಯರು, ಜೋಗತಿಯರು, ಬಸವಿಯರು, ಸೂಳೆಯರು ಹಾಗೂ ಪಾತ್ರದವರು ಎನ್ನುವ ಬೇರೆ ಬೇರೆ ಹೆಸರುಗಳಿಂದ ಕರೆಯುತ್ತಾರೆ. ಹೆಸರುಗಳಲ್ಲಿ ವ್ಯತ್ಯಾಸವಿದ್ದರೂ ಮೂಲತಃ ಇವರೆಲ್ಲರ ಕಸುಬು ಅಲ್ಪಸ್ವಲ್ಪ ವ್ಯತ್ಯಾಸದೊಂದಿಗೆ ತಮ್ಮ ದೇಹವನ್ನು ಅರ್ಪಿಸಿಕೊಳ್ಳುವುದೇ ಆಗಿದೆ. ಇವರು ನಡೆಯುವ ದಾರಿಯಲ್ಲಿ ಸ್ವಲ್ಪ ವ್ಯತ್ಯಾಸವಿರಬಹುದು. ಆದರೆ ಪರಿಣಾಮದಲ್ಲಿ ಎಲ್ಲ ಒಂದೇ ಆಗಿದೆ. ದೇವದಾಸಿ ಎಂದಾಗ ದೇವರ ಸೇವೆಗೆ ಮೀಸಲಾದವಳು ಎಂದು ದೇವರಿಗೆ ಕೊಟ್ಟು ಮದುವೆಯಾದ ಈಕೆ ದೇವರ ಮುಂದೆ ನರ್ತನ ಮಾಡುವ, ಹಾಡುವ ಸಂಪ್ರದಾಯವಿತ್ತು. ಒಟ್ಟಿನಲ್ಲಿ ಈಕೆ ಪುರೋಹಿತರ, ಊರಿನ ಗಣ್ಯರ ಸ್ವತ್ತೂ ಆಗಿದ್ದಳು ಎನ್ನುವುದು ಇಲ್ಲಿನ ವ್ಯಂಗ್ಯ.

ಹೊಲಗೇರಿ ಜನರೆ ಹೆಚ್ಚಾಗಿ ಇಂತಹ ಆಚರಣೆಗಳಿಗೆ ಬಲಿಯಾಗುತ್ತಿದ್ದರು. ಕಾರಣ ಇವರಲ್ಲಿ ಶಿಕ್ಷಣವು ಇಲ್ಲದ್ದರ ಪರಿಣಾಮವಾಗಿ ಮೂಢನಂಬಿಕೆಗಳನ್ನು ಅತಿಯಾಗಿ ನಂಬುತ್ತಿದ್ದರು. ಭೂತ, ಪಿಶಾಚಿಗಳ ಕಲ್ಪನೆಯನ್ನು ಜೀವಂತವಾಗಿರಿಸಿಕೊಂಡಿದ್ದರು. ಮಲ್ಲವ್ವನಿಗೆ ಕಾಯಿಲೆಯಾಗಿದ್ದಾಗ ದೆವ್ವ ತನ್ನನ್ನು ಕಾಡುತ್ತಿದೆ ಎಂದು ಹೇಳಿದಳು. ಅದನ್ನು ನಿವಾರಿಸಲು ಫತರೂ ಅಡಿಗೆಯನ್ನು ಮಾಡಿ ಒಂದು ಬಿದಿರ ಬುಟ್ಟಿಯಲ್ಲಿ ದೊಡ್ಡದಾದ ಎಲೆಗಳನ್ನು ಹಾಸಿ ಅದರ ಮೇಲೆ ಕೋಳಿ ಸಾರಿನ ಪಲ್ಯ, ಬಾಬು ಅರಿಶಿನ ಕಲೆಸಿದ ಬಾನ, ಐದು ಚಪಾತಿ, ಐದು ಎಣ್ಣೆಹೋಳಿಗೆ, ನಿಂಬೆಹಣ್ಣು, ಕಾರೆಳ್ಳು, ಕರಿಮಸಿಯನ್ನು ಇಟ್ಟುಕೊಂಡು ಅದರ ಮೇಲೆ ಅರಿಶಿನ, ಕುಂಕುಮ ಚೆಲ್ಲಿದ್ದನು. ದೇವರ ಮುಂದೆ ದೀಪವನ್ನು ಹಚ್ಚಿ, ತುಂಬಿದ ಬುಟ್ಟಿಯನ್ನು ಮಲ್ಲವ್ವನ ಮುಖದ ಮೇಲೆ ನೆತ್ತಿಯಿಂದ ಪಾದದ ತನಕ, ಕೆಳಗೆ ಮೇಲೆ ಆಡಿಸಿದನು. ಮೇಲಿನಿಂದ ಕೆಳಗೆ ಮೂರು ಸಲ ಮುಂದೆ ಇಳಿಸಿ, ಮತ್ತೆ ಹಿಂದಿನಿಂದಲೂ ಅದೇ ರೀತಿ ಮೂರು ಸಲ ಇಳಿಸಿ ತಿರುಗಿ ನೋಡದೆ ಬುಟ್ಟಿ ಎತ್ತಿಕೊಂಡು ಹೋಗಿ ನಾಲ್ಕು ದಾರಿಗಳು ಕೂಡುವ ಸ್ಥಳದಲ್ಲಿ ಇಳಿಸಿದನು. ಎಡಗಾಲಿನಿಂದ ಬುಟ್ಟಿಗೆ ಮೂರು ಬಾರಿ ಮೆಲ್ಲಗೆ ಒದ್ದು ಮೂರು ಬಾರಿ ಥೂ ಥೂ ಥೂ ಎಂದು ಉಗುಳಿ ತಿರುಗಿ ನೋಡದೆ ಹಳ್ಳದ ದಾರಿಯಲ್ಲಿ ಕೈಕಾಲು ಮುಖ ತೊಳೆದು ಕೊಂಡು ಮನೆಗೆ ಬಂದನು. ಹೀಗೆ ದೆವ್ವವನ್ನು ಬಿಡಿಸಿಕೊಳ್ಳುವ, ಕಾಯಿಲೆಯಾದಾಗ ತಾವೇ ಚಿಕಿತ್ಸೆಯನ್ನು ಮಾಡಿಕೊಳ್ಳುವ ಅಮಾಯಕ ಜನರು ಇವರಾಗಿದ್ದು ಮೌಢ್ಯತೆಗಳಿಗೆ ಸಿಲುಕಿರುವುದನ್ನು ಕಾಣಬಹುದಾಗಿದೆ.

ಹಿಂದಿನ ಕಾಲದಲ್ಲಿಯೂ ಸಹ ಹೆಣ್ಣು ಹೀನಾಯ ಸ್ಥಿತಿಯಲ್ಲಿಯೇ ಇದ್ದಳು. ಅಬ್ರಾಹ್ಮಣ ಹೆಂಗಸಿನ ಜೊತೆ ಸಂಭೋಗ ಮಾಡಲು ಸಾಮಾಜಿಕ ಅಶ್ಲೀಲತೆಯ ಯಾವ ತೊಡಕು ಇಲ್ಲವೆಂದು ಸಾರ್ವತ್ರಿಕ ಹಕ್ಕನ್ನು ಪ್ರತಿಪಾದಿಸಲಾಯಿತು. ವಿಧವೆಯರಿಗೆ ಮರು ವಿವಾಹವನ್ನು ನಿಷೇದಿಸಿದರು. ಶಾಸ್ತ್ರಗಳ ಹೆಸರಿನಲ್ಲಿ ಕಾನೂನು ಕಟ್ಟಳೆಗಳು, ಕಟ್ಟು ಪಾಡುಗಳು, ಮೂಢ ನಂಬಿಕೆಗಳು ಬಲಗೊಂಡವು. ಹೆಣ್ಣಿಗೆ ವ್ಯಕ್ತಿ ಸ್ವಾತಂತ್ರ್ಯವನ್ನೇ ಧಮನ ಮಾಡಿದರು. ಬದುಕಿನ ಎಲ್ಲಾ ಆಯ್ಕೆಗಳಿಂದ ವಂಚಿತಳಾದ ಆಕೆ ಪುರುಷನ ಆಯ್ಕೆಯೇ ಪ್ರಧಾನತೆ ಪಡೆಯಿತು. ಹೀಗೆ ಹೆಣ್ಣು ಶತಮಾನಗಳ ಹಿಂದಿನಿಂದಲೆ ಧಮನಕ್ಕೆ ಒಳಗಾಗಿರುವುದನ್ನು ಕಾಣಬಹುದಾಗಿದ್ದು, ಅದು ಇಚಿದೂ ಕೂಡ ಅಂತ್ಯ ಕಂಡಿಲ್ಲ.

ರಾಜರ ಕಾಲದಲ್ಲಿಯೂ ಸಹ ಹೆಣ್ಣಿನ ಸ್ಥಿತಿ ಇದೇ ಆಗಿತ್ತು. 'ಆ ಕಾಲದಲ್ಲಿ ದೇಶದ ತರುಣಿಯರೆಲ್ಲ ಅವರು ಕ್ಷತ್ರಿಯ ತರುಣಿಯರಿರಲಿ, ಬ್ರಾಹ್ಮಣ ತರುಣಿಯರಿರಲಿ ಯಾರೇ ಆಗಲಿ ರಾಜರ ಹಾಗೂ ಸಾಮಂತರ ಸಂಪತ್ತಾಗಿ ಗಣಿಸಲ್ಪಡುತ್ತಿದ್ದರು.' ಒಬ್ಬೊಬ್ಬ ಸಾಮಂತ ರಾಜರುಗಳಲ್ಲಿ ನೂರಾರು ತರುಣಿಯರ ತಂಡ ಸೇರಿ ಹೋಗಿತ್ತು. ಈ ರಾಜರೂ ತರುಣಿಯರನ್ನೆಲ್ಲಾ ಸೆಳೆದುಕೊಳ್ಳಲು ಹೊಸ ಉಪಾಯ ಹೂಡಿದ್ದರು. ಸುಂದರ

ಸುಂದರ ತರುಣಿಯೊಬ್ಬಳು ಮದುವೆಯಾಗಿ ಪತಿಯ ಬಳಿ ಸೇರುವ ಪ್ರಥಮ ರಾತ್ರಿಯ ಹಿಂದಿನಿರುಳು ರಾಜರು ಸಾಮಂತರು ಭೋಗಿಸುವ ತಂತ್ರ ಹೂಡಿದರು. ಕಡೆಗೆ ಈ ಕಾಮ ಪಿಪಾಸೆ ಧಾರ್ಮಿಕ ಕಾರ್ಯರೂಪದಲ್ಲಿ ಒಂದಾಯಿತು. ತಮ್ಮ ಪುತ್ರಿಯರನ್ನೋ, ಸೊಸೆಯರನ್ನೋ, ಸೋದರಿಯನ್ನೋ ಪಲ್ಲಕ್ಕಿಯೇರಿಸಿ ಅರಸರ ಅಂತಃಪುರಕ್ಕೋ, ಸಾಮಂತರ ರಾಣಿವಾಸಕ್ಕೋ ಒಂದು ದಿನಕ್ಕಾಗಿ ಕಳುಹಿಸಿಕೊಡುವ ಪದ್ಧತಿಯೇ ನಡೆದು ಬಂದಿತು. ಯಾರಾದರೂ ಹೀಗೆ ಕಳುಹಿಸಿಕೊಡಲಿಲ್ಲವೆಂದರೆ ಅವರ ತಲೆ ಹಾರುವುದೇ ಸರಿ. ಒಡೆಯರಿಗೆ ಮೆಚ್ಚುಗೆಯಾದರೆ ಅಂತಹ ತರುಣಿಯರನ್ನು ಅಲ್ಲೇ ಇರಿಸುವರು. ಇರಿಸಿಕೊಳ್ಳುವುದೆಂದರೆ ಅರಸಿಯಾಗಿ ಅಲ್ಲ, ಪರಿಚಾರಿಕೆಯರಾಗಿ ಅರಸಿಯರಾಗುವ ಭಾಗ್ಯ ಲಭಿಸುವುದು ಕೇವಲ ರಾಜಪುತ್ರಿಯರಿಗೋ, ಸಾಮಂತ ಕುಮಾರಿಯರಿಗೋ ಮಾತ್ರ. ಉಳಿದವರಿಗೆಲ್ಲಾ ದಾಸಿಯರ ಸ್ಥಾನ ಅಂತಃಪುರದಲ್ಲಿ ಸೇರಿ ಹೋದ ಇಂತಹ ಸಾವಿರಾರು ಮಂದಿಯಲ್ಲಿ ಅಧಿಕಾಂಶ ತರುಣಿಯರಿಗೆ ಒಂದಿರುಳಿಗಿಂತ ಹೆಚ್ಚು ರಾಜನ ಅಥವಾ ಸಾಮಂತನ ಸಂಗ ದೊರೆತುದಿಲ್ಲ. ರಾಜನ ಕೃಪಾಶ್ರಯಕ್ಕೆ ಬಂದವರೂ ಸಹ ಬಹಳ ಸಂತೋಷವಾಗಿ ಇದ್ದಾರೆಂದು ಹೇಳಲು ಸಾಧ್ಯವಿಲ್ಲ . ಹೀಗೆ ಶತಶತಮಾನಗಳಿಂದಲೂ ಹೆಣ್ಣು ಇದೇ ಸ್ಥಿತಿಯಲ್ಲಿ ಇದ್ದು ಬಾಳಿ ಬಂದವಳಾಗಿದ್ದಾಳೆ.

ಬದುಕು ಕಾದಂಬರಿಯಲ್ಲಿ ಹಲವಾರು ಜಾತಿಯ ಜನರು ಬರುತ್ತಾರೆ ಅದರಲ್ಲಿ ಅಗಸರು, ಸಮಗಾರ, ಹಜಾಮರು, ಮುಸ್ಲಿಂಮರು, ದೊಡ್ಡಿಹೊಲೇರು, ಬೇಲಗಸಲ್ಯಾರು ಕುಂಬಾರರು, ಬುಡಬುಡಕೆಯವರು, ಹೂಗಾರರು, ಪಿಂಜಾರರು, ಎಂಬ ಪಂಗಡದವರನ್ನು ಕಾಣಬಹುದು. ಇವರ ಸಾಮಾಜಿಕ ಜೀವನ ಕ್ರಮಗಳು, ಅವರ ನಂಬಿಕೆ ಆಚರಣೆಗಳು, ಸಾಮಾಜಿಕ ಸ್ಥಾನಮಾನಗಳು ಒಂದೇ ರೀತಿಯಲ್ಲಿ ಕೂಡಿದ್ದು ಹಿಂದಿನ ಆಚರಣೆಗಳಿಗೆ ಹೆಚ್ಚಿನ ಬೆಲೆಯನ್ನು ಕೊಡುತ್ತಾರೆ.

ಮ್ಯಾಗೇರಿಯ ಶಾಣಪ್ಪ ಮತ್ತು ಸುಗಲವ್ವರ ಮನೆಯ ಮಧ್ಯದಲ್ಲಿ ಹುತ್ತ ಬೆಳೆಯುತ್ತಿತ್ತು. ನೋಡ ನೋಡುತ್ತಿದ್ದಂತೆಯೇ ಅದು ದೊಡ್ಡದಾಗಿ ಬೆಳೆದು ನಿಂತಿದ್ದು ಎಲ್ಲರಿಗೂ ಅಚ್ಚರಿ ಮೂಡಿಸುತ್ತಿತ್ತು. ಶಾಣಪ್ಪ ಸುಗಲವ್ವರಿಗೆ ನೀವಿಬ್ಬರು ಗಾಭರಿ ಆಗಬೇಡಿ ನಾನು ಶಿವನ ಕೊರಳಿನ ನಾಗಪ್ಪನು ಇದ್ದೇನೆ. ಈ ಹುತ್ತವನ್ನು ಕೀಳಬೇಡಿ ನಿಮಗೆ ಒಳ್ಳೆಯದನ್ನೆ ಮಾಡುತ್ತೇನೆ. ಎಂದು ಹುತ್ತದ ನಾಗ ಹೇಳಿತ್ತು. ಅದೇ ರೀತಿಯಾಗಿ ಅವರು ಆ ಹುತ್ತವನ್ನು ಒಡೆಯದೆ ಭಯಭಕ್ತಿಯಿಂದ ಹುತ್ತಕ್ಕೆ ಹೂವ ಹಾಕಿ ಪೂಜೆ ಮಾಡುತ್ತಿದ್ದರು. ಊರಿನ ಜನರಿಗೆ ತಿಳಿದು ಸಾಲು ಸಾಲಾಗಿ ಬಂದು ಪೂಜೆ ಮಾಡಿಕೊಂಡು ಹೋಗುತ್ತಿದ್ದರು. ಇಷ್ಟೆಲ್ಲ ಭಯಭಕ್ತಿಯಿಂದ ಪೂಜೆ ಮಾಡುತ್ತಿದ್ದರು. ಒಂದು ರಾತ್ರಿ ಹಾವು ಬಂದು ಶಾಣಪ್ಪನ ಹೆಬ್ಬೊಟ್ಟಿಗೇ ಬಾಯಿ ಹಾಕಿ ಕಚ್ಚಿ ಹೋಗಿತ್ತು. ವಿಷವೇರಿ ಶಾಣಪ್ಪ ಸತ್ತುಬಿದ್ದಿದ್ದನು. ದೇವರ ಹಾವು ಬರುವುದು, ನಿಮಗೆ ಒಳ್ಳೆಯದ್ದನ್ನು ಮಾಡುತ್ತೇನೆ ಎಂದು ಮಾತಾಡುವುದನ್ನು ನಂಬಲು ಸಾಧ್ಯವೇ? ಇಲ್ಲಿ ಇವರ ಮೂಢನಂಬಿಕೆಗಳಿಂದ ಸುಗಲವ್ವ ವಿಧವೆಯಾಗುತ್ತಾಳೆ.

ಕಾದಂಬರಿಯಲ್ಲಿ ಮೂಢನಂಬಿಕೆಗಳಿಗೆ ಬಲಿಯಾಗುವ ಹೆಣ್ಣು ಮಕ್ಕಳಲ್ಲಿ ಇನ್ನು ಬಹಳ ಮಂದಿ ಇದ್ದಾರೆ. ದೇವದಾಸಿಯಂತಹ ಅನಿಷ್ಟ ಪದ್ಧತಿಗೆ ಬಲಿಯಾಗುತ್ತಾರೆ. ಮೈ ಮಾರಿಕೊಂಡು ಬದುಕು ನೂಕುವಂತೆ ಪ್ರೇರೇಪಿಸುವ ಧಾರ್ಮಿಕ ಒತ್ತಡದಿಂದಾಗಿ ಅನಕ್ಷರಸ್ಥ ಜನ ಸಮುದಾಯ ಅತ್ಯಂತ ಸುಲಭವಾಗಿ ಶೋಷಣೆಗೆ ಬಲಿಯಾಗುತ್ತಾರೆ. ಇಂತಹ ಕಾರ್ಯಕ್ಕೆ ತಮ್ಮನ್ನು ತಾವು ಸ್ವಇಚ್ಛೆಯಿಂದಲೇ ಸಮರ್ಪಿಸಿಕೊಳ್ಳುವಂತೆ ಪ್ರಲೋಭನೆಗಳನ್ನು ನೀಡುವುದರ ಜೊತೆಗೆ ಧಾರ್ಮಿಕ ಬೆದರಿಕೆಯೂ ದೇವದಾಸಿಯರನ್ನಾಗಿ ಮಾಡುತ್ತಿದೆ. ಈ ರೀತಿಯ ಜೀವನ ವಿಧಾನವನ್ನು ಒಪ್ಪಿ ನಡೆಯಲು ಅವರ ಸಾಮಾಜಿಕ, ಆರ್ಥಿಕ ಮತ್ತು ಸಾಂಸ್ಕೃತಿಕ ಪರಿಸರಗಳ ಪ್ರಭಾವಗಳು ಬಹುವಾಗಿ ಕಾರಣಗಳಾಗಿವೆ. ಆದ್ದರಿಂದ ದೇವದಾಸಿ ಪದ್ಧತಿ ಈಗಲೂ ಜೀವಂತವಾಗಿ ಇದೆ ಎನ್ನಬಹುದು.

ಮಾದರ ಕೇರಿಯ ಮಾನಿಂಗಪ್ಪ ಮತ್ತು ಮಾಳವ್ವನಿಗೆ ಮದುವೆಯಾದ ಬಹಳ ವರ್ಷಗಳ ತನಕ ಮಕ್ಕಳಾಗಿರಲಿಲ್ಲ. ಸಮಾಜದ ನಿಂದನೆಯನ್ನು ಎದುರಿಸಲು ಬಹಳ ಕಷ್ಟಪಡುತ್ತಿದ್ದರು. ನೀರಿಗೆ, ಕೆಲಸಕ್ಕೆ ಅಂತ ಮಾಳವ್ವ ಹೋದ ಕಡೆಯಲ್ಲೆಲ್ಲಾ ಊರು ಕೇರಿಯ ಹೆಂಗಸರೆಲ್ಲ ಈಕೆಯನ್ನು ಗೊಡ್ಡಿ, ಬಂಜೆ ಎಂದು ಮುಂತಾಗಿ ಹೀಯಾಳಿಸುತ್ತಿದ್ದರು. ಗಂಡ ಆಗಾಗ ಇಂತಹ ಚಂದದ ಚೆಲುವು ನೀಡಿದ ಆ ಪರಮಾತ್ಮ ಮಕ್ಕಳ ಮನೆ ಇಡುವುದು ಮರೆತುಬಿಟ್ಟನಲ್ಲಾ ಎಂದು ಗೋಳಾಡುತ್ತಿದ್ದನು. ಹೆಂಡತಿಗೂ ಕೂಡ ಅದೇ ದುಃಖ. ತಮಗೊಂದು ಮಗುವಾದರೆ ಸಾಕು ಎಂದು ದೇವರು, ದೆವ್ವ, ಆಸ್ಪತ್ರೆ, ನಾಟೀ ಔಷದಿ ಎಂದು ಏನೇಲ್ಲಾ ಮಾಡುತ್ತಾರೆ. ಆದರೆ ಯಾವುದೂ ಇವರ ಸಹಾಯಕ್ಕೆ ಬರುವುದಿಲ್ಲ.

ಇದೇ ದುಃಖದಲ್ಲಿಯೆ ದಿನಗಳನ್ನು ದೂಡುತ್ತಿದ್ದ ದಂಪತಿಗಳು ಒಂದು ರಾತ್ರಿ ಮಲಗಿದ್ದಾಗ ಅವರ ಕುಲದೇವರನ್ನು ಬೇಡಿಕೊಳ್ಳುತ್ತಾರೆ. ನಮಗೆ ಮಕ್ಕಳಾದ್ರೆ ಮೊದಲ ಹೆಣ್ಣುಮಗುವನ್ನು ನಿನ್ನ ಸೇವೆಗೆ ಬಿಡುತ್ತೇವೆ ಅಂದರೆ 'ಜೋಗಣಿ' ಮಾಡುತ್ತೇವೆ. ಗಂಡು ಮಗುವಾದರೆ ತಾವೇ ಸಾಕಿಕೊಳ್ಳುತ್ತೇವೆ ಎಂದು ಬೇಡಿಕೊಳ್ಳುತ್ತಾರೆ. ದೇವರ ಮಹಿಮೆಯೋ, ಗಂಡ ಹೆಂಡತಿಯರ ಪುಣ್ಯವೋ, ಮುಂದೆ ಒಂದೇ ವರ್ಷದಲ್ಲಿ ಇವರಿಗೆ ಎರಡು ಅವಳಿ ಜವಳಿ ಹೆಣ್ಣು ಮಕ್ಕಳಾಗುವುದನ್ನು ಕಾಣುತ್ತೇವೆ. ಅವರಿಗೆ ದುರ್ಗಿ ಮರ್ಗಿ ಎಂದು ಹೆಸರನ್ನಿಡುತ್ತಾರೆ.

ಮಕ್ಕಳು ಬೆಳೆದು ದೊಡ್ಡವರಾಗಿ ಮೈನೆರೆದಾಗ ಮತ್ತೊಂದು ಸಮಸ್ಯೆ ಉದ್ಭವಿಸುತ್ತದೆ. ಇವರು ದೇವಿಗೆ ಬೇಡಿಕೊಂಡ ಹಾಗೆ ಮೊದಲ ಹೆಣ್ಣು ಮಗುವನ್ನು ಜೋಗಿಣಿ ಮಾಡಬೇಕು. ಆದರೆ ಆಗಿದ್ದು ಅವಳಿ ಜವಳಿ. ಯಾರನ್ನು ದೇವಿಯ ಸೇವೆಗೆ ಬಿಡುವುದು ಎನ್ನುವ ಗೊಂದಲ ಮೂಡುತ್ತದೆ. ಊರಿನ ಪಂಚರನ್ನು ಕೇಳುತ್ತಾರೆ 'ಎರಡು ಮಕ್ಕಳು ಜೊಚ್ಚಲ ಮಕ್ಕಳೇ' ಆಗಿರುವುದರಿಂದ ಇಬ್ಬರನ್ನೂ ದೇವಿಯ ಸೇವೆಗೆ ಬಿಡಿ ಎಂದು ಹೇಳುತ್ತಾರೆ. ಅವರ ಮಾತಿಗೆ ಪ್ರತಿ ಮಾತಾಡದೆ ಇಬ್ಬರನ್ನು 'ಜೋಗಿಣಿ'ಯಾಗಿ ಮಾಡುವುದನ್ನು ಕಾಣುತ್ತೇವೆ.

ಇವರಿಬ್ಬರೂ ಪ್ರತಿದಿನ ತಲೆಯ ಮೇಲೆ ಜೋಗದ ಪರಡಿ ಹೊತ್ತು, ಭಿಕ್ಷೆಯನ್ನು ಬೇಡುತ್ತಾ, ಅವರಿವರಿಗೆ ಸೆರಗು ಹಾಸುತ್ತಾ ಜೀವನವನ್ನು ಕಳೆಯುತ್ತಿದ್ದರು. ಗಂಡಸರು ಕೊಡಿಸಿದ ಸಿಂಧಿಯನ್ನು ಕುಡಿಯುತ್ತಾ ಜೋರು ಧ್ವನಿಯಲ್ಲಿ ಹಾಡುಗಳನ್ನು ಹೇಳುವುದನ್ನು ಕಾಣುತ್ತೇವೆ. ಅವರು ಹೆಚ್ಚಾಗಿ ಹಾಡುತ್ತಿದ್ದ ಹಾಡು

ಬನ್ನಿ ಗಿಡದ ಮಾಪುರಿ
ಬಯಲಾಗ ನಿನ್ ಜಾತರೀ
ಬಯಲಾಗ ನಿನ್ ಜಾತರೀ
ಊರುಬಿಟ್ಟು ಹರದಾರಿ.. ಬನ್ನಿ ಗಿಡದ ಮಾಪುರೀ..
ನಾನಂಬೋ ಗಂಡಸಿನ
ಮೀಸಿ ನೀ ಬೋಳಸಿದೀ
ಕವಡಿ ಸರ ಕೊಳ್ಳಾಗಕಟ್ಟಿ
ರೇಸಮಿ ಸೀರೆ ಉಡಸಿದೀ.. ಬನ್ನಿ ಗಿಡದ ಮಾಪುರಿ...[೧೦] .

ಎಂದು ಹಾಡುಗಳನ್ನು ಹೇಳಿ ಎಲ್ಲರಿಗೂ ಸಂತಸವನ್ನು ಉಂಟು ಮಾಡುತ್ತಿದ್ದರು.

ಒಟ್ಟಿನಲ್ಲಿ ಹೆತ್ತವರ ಹರಕೆಗೆ ಹರೆಯದ ಹೆಣ್ಣು ಮಕ್ಕಳು ಗಂಧದ ಹುಟಗಿ ಉಟ್ಟು ಬೆತ್ತಲೆಯಾಗಿ ಅಂದು 'ಜೋಗಿಣಿ'ಗಳಿದಿದ್ದ ಇವರು ಮನೆಮಠವೆನ್ನದೆ ತಿರುಗಾಡುತ್ತಾ ತಮ್ಮ ಜೀವನವನ್ನು ಕಳೆಯುತ್ತಾರೆ.

ಹಿಂದಿನ ಕಾಲದಲ್ಲಿ ದೇವತೆಗಳನ್ನು ತೃಪ್ತಿಪಡಿಸಲು ಹೆಣ್ಣನ್ನು ಬಲಿ ಕೊಡುವ ಪದ್ಧತಿಯಿತ್ತು. ಅದನ್ನು ಹೋಗಲಾಡಿಸಿ ಹೆಣ್ಣಿನ ಪ್ರಾಣ ತೆಗೆಯುವ ಬದಲು ದೇವಾಲಯಗಳ ಕೆಲಸ ಕಾರ್ಯಗಳಿಗೆ ಅರ್ಪಿಸುವ ಪದ್ಧತಿ ಜಾರಿಕೆ ತಂದರು. ಅದುವೆ ತರುವಾಯ ಬರುಬರುತ್ತಾ ಪ್ರಾಣ ತೆಗೆಯುವ ಜಾಗದಲ್ಲಿ ಮಾನ ತೆಗೆಯುವ ಪದ್ಧತಿ ರೂಢಿಯಾಯಿತು.

ಇದನ್ನೇ ಅಸ್ತ್ರವಾಗಿಸಿಕೊಂಡು ಮೇಲುಜಾತಿಯ ಜನ ಕೆಳ ಜಾತಿಯ ಜನರನ್ನು ಶೋಷಿಸುವ ಸಲುವಾಗಿ, ಕೆಳಜಾತಿಯ ಸುಂದರ ಹೆಂಗಸರನ್ನು ಅನುಭವಿಸುವ ಸಲುವಾಗಿಯೇ ದೇವದಾಸಿ ಪದ್ಧತಿಯನ್ನು ಮುಂದುವರೆಸಿಕೊಂಡು ಬಂದರು.

ಈ ಪದ್ಧತಿಗೆ ಮತ್ತೊಂದು ಬಲಿಯಾದದು ತುಳುಜಾ ಎಂಬ ಹೆಣ್ಣು. ಚುಂಚೂರಿಗೆ ಹತ್ತಿರವಾಗಿ ಇರುವ ಹಳ್ಳಿಗಳಲ್ಲಿ ಜಂಬಗಿ ಒಂದು. ಆ ಜಂಬಗಿ ಹಳ್ಳಿಯ ಪರಪ್ಪನ ಮಗಳು ತುಳುಜಾ. ಜೋಗಣಿ ಆಗುವುದು ಇಷ್ಟವಿಲ್ಲದ ಈಕೆ ತನ್ನ ತಂದೆ ತಾಯಿಯ ಬಳಿ ತನ್ನ ಸಂಕಟ ತೋಡಿಕೊಳ್ಳುತ್ತಾಳೆ. "ಯಪ್ಪಾ.... ನಾ ಜೋಗಣಿ ಆಗಂಗಿಲ್ಲಪ್ಪ. ಯಾರ ಜೋಡಿಯರೆ ನನಗ ಮದಿ ಮಾಡಿ ಕುಡು. ನಾ ಒಬ್ಬ ಗಂಡನ ಹೆಣ್ತ್ಯಾಗಿ ಗರತ್ಯಾಗಿ ಸಂಸಾರ ಮಾಡ್ತೀನಿ. ಆದರೆ ಈ ದೇವರ ಹೆಸರಿನ ಮೇಲೆ ಊರಸೂಳಿ ಮಾತ್ರ ಎಂದೂ

---

೧೦. ಗೀತಾನಾಗಭೂಷಣ : ಬದುಕು : ಪುಟಸಂಖ್ಯೆ:೨೦೨ : ಲೋಹಿಯಾ ಪ್ರಕಾಶನ :೨೦೦೧

ಆಗಂಗಿಲ್ಲೋ ಯಪ್ಪಾ...." ಎಂದು ಅತ್ತಳು. ಮಗಳ ನೋವನ್ನು ಅರ್ಥ ಮಾಡಿಕೊಂಡ ತಂದೆ ತಾಯಿಗಳು ಆಚರಣೆಗಳನ್ನು, ರೀತಿ ರಿವಾಜುಗಳನ್ನು ಎದುರಿಸಿ ನಿಲ್ಲುವ ಧೈರ್ಯವಿಲ್ಲದೆ ಸುಮ್ಮನಾಗುತ್ತಾರೆ. ಕೊನೆಗೂ ಅವಳನ್ನು ಜೋಗಿಣಿ ಮಾಡುತ್ತಾರೆ. ಅದೇ ಊರಿನ ಸಾವ್ಕಾರ ಅವಳ ಮೈಯ ಮೀಸಲನ್ನು ಮುರಿಯುತ್ತಾನೆ.

ಅದೇ ಊರಿನ ಮತ್ತೊಂದು ಹೆಣ್ಣು ತುಳಜಾ. ಮಾದರ ಕಳಸಪ್ಪನ ಮಗಳು. ಈಕೆ ಬಾಲ್ಯದಿಂದಲೇ ಜೋಗಣಿಯರ ಬದುಕನ್ನು ಹತ್ತಿರದಿಂದಲೇ ನೋಡ ನೋಡುತ್ತಲೆ ಬೆಳೆದ ಹುಡುಗಿಯಾಗಿದ್ದಳು. ಅವರು ಪಡುವ ಕಷ್ಟಗಳನ್ನು ಕಣ್ಣಾರೆ ಕಂಡಿದ್ದಳು. ಆದುದರಿಂದ ದೇವಿಯ ಸೇವೆಗೆ ನಿಂತು ಬಂದ ಬಂದ ಗಂಡಸರಿಗೆಲ್ಲ ಸೆರಗು ಹಾಸುವ ಈ ಹಲ್ಕಟ್ ಧಂದೆ ಆಕೆಗೆ ಇಷ್ಟವಿರಲಿಲ್ಲ. ಆದರೂ ಮನೆಯವರ ಒತ್ತಾಯಕ್ಕೆ ಕಟ್ಟು ಬಿದ್ದು ತಾನು ಕೂಡ ತನ್ನ ಸುಂದರವಾದ ಬದುಕನ್ನು ಅಂತ್ಯಗೊಳಿಸಿಕೊಂಡು, ಎಲ್ಲಾ ಜೋಗಣಿಯರ ಹಾಗೆ ಜೀವನವನ್ನು ಸವೆಸುವುದನ್ನು ಕಾಣುತ್ತೇವೆ.

ಹೀಗೆ ಕೊಳಗೇರಿಯ ಹೆಣ್ಣು ಮಕ್ಕಳು 'ಜೋಗಿಣಿ'ಯಾಗುತ್ತಿದ್ದು ಈ ಆಚರಣೆಯ ಹಿಂದಿರುವ ಉದ್ದೇಶವೇನು ಒಳಮರ್ಮವೇನು ಎಂದು ಯಾರೂ ಅರಿಯಲು ಹೋಗುವುದಿಲ್ಲ. ದೇವರು ಎನ್ನುವ ವಿಗ್ರಹದಲ್ಲಿ ದೇವರ ಅಸ್ಥಿತ್ವವನ್ನು ಕಾಣಲು ಸಾಧ್ಯವಾಗುತ್ತಿಲ್ಲ. ಅಂತಹದರಲ್ಲಿ ದೇವರು ಬಂದು ಹೇಳುತ್ತಾನೆಯೇ. ಒಂದು ಕಟ್ಟಿಗೆಯ ಗೊಂಬೆ ಅದಕ್ಕೆ ಸೀರೆಯನ್ನು ಉಡುಸಿ, ಕುಪ್ಪಸವನ್ನು ತೊಡಿಸಿ ಅರಿಶಿಣ ಕುಂಕುಮವನ್ನು ಹಚ್ಚಿ ಅದುವೆ ದೇವರೆಂದು ಬನ್ನಿ ಮರಕ್ಕೆ ಕೂರಿಸಿರುತ್ತಾರೆ. ಅಂತಹ ಗೊಂಬೆ ಪೂಜೆ ಮಾಡಿದರೆ ಮಾಡಿಸಿಕೊಳ್ಳುತ್ತದೆ ಇಲ್ಲದಿದ್ದರೆ ಇಲ್ಲ. ಆ ಗೊಂಬೆಯನ್ನು ಹೊರಗಡೆ ಬಿಸಾಕಿದರೆ ಅದನ್ನು ಆಡುವ ಹುಡುಗರ ಆಟದ ಸಾಮಾನಾಗಿ ಬಳಸಿ ಬಿಸಾಕುತ್ತಾರೆ. ಅಂತಹ ಗೊಂಬೆಗೆ ಈ ಹಳ್ಳಿಯ ಅಮಾಯಕ ಮುಗ್ಧ ಜನರು ಭಯ ಪಡುತ್ತಾರೆ. ಇದಕ್ಕೆಲ್ಲಾ ಕಾರಣ ಈ ದೇವಿಗೆ ಪೂಜೆ ಮಾಡುವ ಪೂಜಾರಪ್ಪ. ಅವನು ಹಣದ ಆಸೆಗಾಗಿ ತನ್ನ ವೈಯಕ್ತಿಕ ಲೈಂಗಿಕ ಸ್ವಾರ್ಥಕ್ಕೆ ಇಂತಹ ಕೆಲಸವನ್ನು ಮಾಡುತ್ತಾನೆಂತಲೇ ಭಾವಿಸಬಹುದು.

ಊರಿನ ಜನರಿಗೆ ದೇವರೆಂದರೆ ಭಯ ಭಕ್ತಿ ಇರುತ್ತದೆ. ದೇವರು ತನ್ನ ಮಾತುಗಳನ್ನು ಪೂಜಾರಪ್ಪನ ಮೂಲಕ ಹೇಳಿಸುತ್ತಾನೆ ಎಂದು ಭಾವಿಸಿರುತ್ತಾರೆ. ಅದನ್ನೇ ಬಂಡವಾಳವಾಗಿಸಿಕೊಳ್ಳುವವನು ಪೂಜಾರಪ್ಪ. ಈತ ಊರಿನ ಗೌಡ, ಕುಕ್ಕಣ್ಣಿ, ಶೆಟ್ಟಿ, ಸಾವ್ಕಾರರ, ಚಮಚಾ ಆಗಿದ್ದು ಅವರು ಹೇಳಿದ ಹಾಗೆ ಕೇಳುತ್ತಾನೆ. ಯಾವುದಾದರೂ ಹುಡುಗಿಯ ಮೇಲೆ ಇವರ ಮನಸು ಬಿದ್ದರೆ ಈ ಪೂಜಾರಿಯನ್ನು ಕರೆಸಿ ಹೇಳುತ್ತಾರೆ. ಅದೇ ಪ್ರಕಾರವಾಗಿ ಪೂಜಾರಪ್ಪ ಶುಕ್ರವಾರದ ದಿನ ಸಿಂಧಿಯನ್ನು ಕುಡಿದು ಅದೇ ನಿಶೆಯಲ್ಲಿ ಕುಣಿಯುತ್ತಾ, ಮೈಯನ್ನು ತೂಗಾಡಿಸುತ್ತಾ ಸಾವ್ಕಾರನು ಹೇಳಿಕೊಟ್ಟ ಹಾಗೆ ಎಲ್ಲವನ್ನು ದೇವಿಯ ಹೆಸರಿನಲ್ಲಿ ಹೇಳುತ್ತಾನೆ.

ಹರೆಯಕ್ಕೆ ಬಂದಿರುವ ಚಂದದ ಹೆಣ್ಣನ್ನು ದೇವಿಗೆ ಜೋಗಣಿ ಬಿಡಬೇಕೆಂದು ಹೇಳಿ ಅವರಲ್ಲಿ ಭಯವನ್ನುಂಟು ಮಾಡುತ್ತಾನೆ. ಅವನ ಮಾತುಗಳನ್ನು ನಂಬುವ ಜನ ತಮ್ಮ ಮಕ್ಕಳನ್ನು ಜೋಗಣಿ ಮಾಡಲು ತಯಾರಾಗುತ್ತಾರೆ. ಸಾವ್ಕಾರ ಅವಳ 'ಜೋಗಣಿ' ವೆಚ್ಚವನ್ನು ಕೊಡುವುದಾಗಿ ಹೇಳಿ ಅಮಾಯಕ ಹೆಣ್ಣಿನ ಬಾಳನ್ನು ಹಾಳು ಮಾಡುತ್ತಾನೆ.

ಹೀಗೆ ಮೂಢನಂಬಿಕೆಯ ಹೆಸರಿನಲ್ಲಿ ಅಮಾಯಕ ಜನರ ವೈಯಕ್ತಿಕ ಬದುಕಿನಲ್ಲಿ ಚಕ್ಕಂದವಾಡುವ ಗೌಡ, ಕುಕ್ಕಣಿ, ಶೆಟ್ಟಿ, ಕುಲಕರ್ಣಿ, ಸಾವ್ಕಾರರು ಅನೇಕ ಮಂದಿ ಇದ್ದಾರೆ, ಪ್ರಾದೇಶಿಕತೆಯ ಶೋಷಣೆಯನ್ನು ಸೂಚಿಸುವುದಾದರೂ ಕರ್ನಾಟಕದಾದ್ಯಂತ, ಭಾರತದ್ಯಾಂತ, ಜಗತ್ತಿನಾದ್ಯಾಂತ ಅದೆಷ್ಟು ಮಹಿಳೆಯರು ಇಂತಹ ಶೋಷಣೆಗೆ ಒಳಗಾಗಿದ್ದಾರೆಯೋ ಬಲ್ಲವರ್ಯಾರು. ಆದರೂ ಇಂತಹ ಒಂದು ಅನಿಷ್ಟ ಪದ್ಧತಿ ನಡೆಯುತ್ತಿದೆ ಎನ್ನುವುದರ ಪ್ರತ್ಯಕ್ಷ ರೂಪವನ್ನು ಲೇಖಕಿ ತಮ್ಮ ಕಾದಂಬರಿಯಲ್ಲಿ ಕಟ್ಟಿಕೊಟ್ಟಿರುವುದು ನಿಜಕ್ಕೂ ಮೆಚ್ಚಬೇಕಾದ ಸಂಗತಿಯಾಗಿದೆ. ಅದುವರೆಗೂ ಅನ್ಯಾಯವನ್ನು ಸಹಿಸಿಕೊಂಡಂತಹ ಜೀವವೊಂದು ವೈಯಕ್ತಿಕವಾಗಿ ಹೋರಾಟ ಮಾಡುವುದಕ್ಕೆ ಸಾಧ್ಯವಾಗದಾಗ, ತಮ್ಮ ಮೌನವನ್ನು ಮುರಿದು ಕಾದಂಬರಿಯನ್ನು ಕಟ್ಟಿಕೊಡುತ್ತಲೇ ಪ್ರಾದೇಶಿಕ ಶೋಷಣೆಯನ್ನು ತೆರೆದು ತೋರಿಸಿದ್ದಾರಂತಲೇ ಭಾವಿಸಬಹುದು. ಇದೊಂದು ರೀತಿಯಲ್ಲಿ ಬಂಡಾಯವೆಂತಲೇ ಹೇಳಬಹುದಾಗಿದ್ದು,–ಸ್ತ್ರೀ ಸಂವೇದನೆಯ ಸೂಕ್ಷ್ಮವನ್ನು ಲೇಖಕಿಯಲ್ಲಿ ಗುರುತಿಸಬಹುದಾಗಿದೆ.

**ಸಾಂಸಾರಿಕ ಸೆಳೆತದಲ್ಲಿ**

ಜೀವ ವಿಕಾಸದಲ್ಲಿ ಎಲ್ಲಾ ಚರಾಚರಗಳಲ್ಲಿ ವಿಶೇಷತೆಯನ್ನು ಪಡೆದಿರುವುದು, ಸೃಷ್ಟಿಯಲ್ಲಿ ಶ್ರೇಷ್ಠತೆಯನ್ನು ಪಡೆದಿರುವುದು ಮನುಷ್ಯ ಮಾತ್ರ. ಎಲ್ಲಾ ಮನುಷ್ಯರು ಸ್ವತಂತ್ರವಾಗಿ ಜನಿಸಿ ಘನತೆ ಹಾಗು ಹಕ್ಕುಗಳಲ್ಲಿ ಸಮಾನರಾಗಿದ್ದಾರೆ. ಮನುಷ್ಯರಲ್ಲಿ ಎರಡು ಜಾತಿಗಳು ಇದ್ದು ಒಂದು ಗಂಡು ಜಾತಿ ಮತ್ತೊಂದು ಹೆಣ್ಣು ಜಾತಿ ಎಂಬುದಾಗಿದೆ. ಇದರಲ್ಲಿ ಸ್ತ್ರೀ ಪುರುಷರೆಂಬ ಬೇದಭಾವವಿಲ್ಲ ಇಬ್ಬರನ್ನು ಒಗ್ಗೂಡಿಸಿಕೊಂಡೆ ಮಾನವರೆಂದು ಕರೆಯುವುದು. ಕಾಲಗಳು ಗತಿಸಿದ ಹಾಗೆ ಮಹಿಳೆ ಪುರುಷರಿಗಿಂತ ಕೀಳು, ಪುರುಷನ ಅಧೀನ ಎಂಬ ಅಭಿಪ್ರಾಯಗಳು ಸ್ಥಾಪನೆಗೊಂಡವು. ಆಕೆಯನ್ನು ಒಂದು ವಸ್ತುವಾಗಿ ಕಾಣುವ ಪ್ರವೃತ್ತಿಗಳು ಬೆಳೆದವು.

ಗಂಡು ಹೆಣ್ಣಿನ ಅವತಾರವಾದಂದಿನಿಂದಲೇ ಅವರಿಬ್ಬರ ಪರಸ್ಪರ ಆಕರ್ಷಣೆ ಪ್ರಾರಂಭವಾಯಿತು. ಗಂಡು ತನ್ನ ಗಡಸುತನ, ಪೌರುಷತ್ವಕ್ಕೆ ಹೆಸರಾದಂತೆ ಹೆಣ್ಣು ಗಂಡಿಗೊಂದು ರಹಸ್ಯದ ಬೀಡು, ಕನಸಿನಗೂಡು ಆಗಿದ್ದಾಳೆ. ಆಕೆಯನ್ನು ಅನೇಕ ವಿಧಗಳಲ್ಲಿ ಅರ್ಥ ಮಾಡಿಕೊಳ್ಳಲು ಪ್ರಯತ್ನಿಸಿದ ಪುರುಷನಿಗೆ ಅವಳೊಂದು ಸವಾಲೇ ಆಗಿದ್ದಾಳೆ.

ಮೀನಿನ ಹೆಜ್ಜೆಯನ್ನೂ ಗುರುತಿಸಿದ, ನಕ್ಷತ್ರಗಳನ್ನು ಎಣಿಸಿದ, ಆಕಾಶದಲ್ಲಿ ಪಕ್ಷಿಗಳ ರೀತಿ ಹಾರಾಡುವುದನ್ನು ಕಲಿತ ಮಾನವನಿಗೆ ಹೆಣ್ಣಿನ ಮನಸ್ಸನ್ನು ಅರ್ಥಮಾಡಿಕೊಳ್ಳಲು ಸಾಧ್ಯವಾಗಲಿಲ್ಲ. ಕಟ್ಟಕಡೆಗೆ ಆತ ಆಕೆಯನ್ನು ಅರ್ಥ ಮಾಡಿಕೊಳ್ಳಲು ಪ್ರಯತ್ನಿಸಿದ ಪರಿ ಮುಖಸ್ತುತಿಯಿಂದ. ಹೆಣ್ಣಿನ ಅಂತರಂಗ–ಬಹಿರಂಗಗಳನ್ನು ಹೊಗಳಲು ಗಂಡು ಬಾಯಿ ತೆರೆದಂದಿನಿಂದ ಇಂದಿನವರೆಗೂ ಆತ ತನ್ನ ಬಾಯನ್ನು ಮುಚ್ಚಿಲ್ಲ. ಹೆಣ್ಣಿನ ಅಂಗಾಗಗಳನ್ನು ಹೊಗಳಿ ವರ್ಣಿಸುವ ಆತ ಬಹುಶಃ ತನ್ನ ನಾಲಗೆಗೆ ಮುಂದೆ ಎಂದೂ ವಿಶ್ರಾಂತಿ ಕೊಟ್ಟಿಲ್ಲವೆನ್ನಿಸುತ್ತದೆ.

ಹೆಣ್ಣು ಎಷ್ಟೇ ಗಹನಳಾದರೂ ಗಂಭೀರಳಾದರೂ ಹೊಗಳಿಕೆಗೆ ಬಹುಬೇಗ ಸೋಲುವ ಸ್ವಭಾವದವಳು. ಪುರುಷ ಹೆಣ್ಣಿನ ಈ ದುರ್ಬಲ ಗುಣವನ್ನು ತನ್ನ ಸ್ವಂತ ಸುಖ–ಸಂತೋಷಕ್ಕೆ, ಚೆನ್ನಾಗಿ ಉಪಯೋಗಿಸಿಕೊಂಡ. ಹೊಗಳಿ ಹೊಗಳಿ ಆಕೆಯನ್ನು ತನ್ನ ದಾಸಿಯನ್ನಾಗಿ ಮಾಡಿಕೊಂಡ. ಸುಖಲೋಲುಪತೆಗೆ ಒಡ್ಡಿದ ಮೈ ಮನ ಎರಡೂ ಹೆಣ್ಣನ್ನು ಸುಲಭದಲ್ಲಿ ಗಂಡಿನ ಗುಲಾಮಳನ್ನಾಗಿಸಿದವು. ಬುದ್ಧಿವಂತ ಪುರುಷ ತನ್ನೆಲ್ಲ ಪ್ರತಿಭೆಯನ್ನು ಉಪಯೋಗಿಸಿ, ನೀನೇ ಶೃಂಗಾರದ ರಸದೇವತೆ, ರತಿ ಎಂದು, ಶಕ್ತಿದೇವಿ ಪಾರ್ವತಿ ಎಂದು ಸಂಪತ್ತಿನ ಒಡತಿ ಲಕ್ಷ್ಮಿ ಎಂದು, ಸಂಗೀತದ ರಸವಾಹಿನಿ ಸರಸ್ವತಿ ಎಂದು ಸಾಹಿತ್ಯ–ಕಾವ್ಯದ ಅಧಿದೇವತೆ ಶಾರದೆ ಎಂದು, ವಿಶೇಷ ರೀತಿಯಿಂದ ವರ್ಣಿಸಿದ.[೧೧]

ಹೊಗಳಿಕೆಗೆ ಮಣಿಯದ ಹೆಣ್ಣೆ ಇಲ್ಲ. ಹೀಗಾಗಿ ಇವನ ಹೊಗಳಿಕೆಗೆ ಒಳಗಾಗಿ ಹೆಣ್ಣು ಮೈ ಮರೆತಳು. ಪ್ರಪಂಚದಲ್ಲಿ ಇರುವ ಎಲ್ಲಾ ಚರಾಚರ ವಸ್ತುಗಳಿಗೂ ಮಿಗಿಲಾದವಳು ನೀನೆ, ನಿನ್ನನ್ನು ಬಿಟ್ಟು ಬೇರೆ ಇಲ್ಲವೆಂದು ಹೊಗಳಿದನು. ಈ ಮಾತುಗಳೇ ನಿಜವೆಂದು ನಂಬಿ ಈ ಭ್ರಾಮಕ ಪ್ರಪಂಚದಲ್ಲಿ ತನ್ನ ಅಸ್ತಿತ್ವವನ್ನೇ ಮರೆತಳು. ಗೀತಾ ನಾಗಭೂಷಣ್‌ರ ಕಾದಂಬರಿಯಲ್ಲಿ ಹೆಣ್ಣು ಇದೇ ರೀತಿಯಾಗಿ ಹೊಗಳಿಕೆಗೆ ಒಳಗಾಗಿ, ಗಂಡಿನ ಸೆಳೆತಕ್ಕೆ ಒಳಗಾಗಿ ಅಲ್ಲಿ ವೇದನೆಯನ್ನು ಪಡುತ್ತಾಳೆ. ಇನ್ನು ನಮ್ಮ ಸಾಮಾಜಿಕ ವ್ಯವಸ್ಥೆಯಲ್ಲಿ ಮದುವೆಯಾದರೆ ಮಾತ್ರ ಹೆಣ್ಣಿನ ಬಾಳು ಸುಗಮವಾಗಿರುತ್ತದೆಂದು ಭಾವಿಸುತ್ತಾರೆ. ಮದುವೆಯಾದ ಹೆಣ್ಣು ಆ ಮನೆಯಲ್ಲಿ ಕಾಲಿಟ್ಟ ಗಳಿಗೆಯಿಂದ ಕೊನೆ ಕ್ಷಣದವರೆಗೂ ಸಂಸಾರವೆಂಬ ಒದ್ದಾಟದಲ್ಲೆ ಜೀವನವನ್ನು ಕಳೆಯುತ್ತಾಳೆ.

ಕಥಾನಾಯಕನ ರೀತಿ ತೋರುವ ಜಮಾದಾರ ಮಲ್ಲಪ್ಪನು ತನ್ನ ಸಂಸಾರವನ್ನು ಉತ್ತಮ ರೀತಿಯಲ್ಲಿ ನಿಭಾಯಿಸಿ ಹೆಂಡತಿ ಮಕ್ಕಳ ಮೇಲೆ ಪ್ರೀತಿಯ ಮಳೆಯನ್ನು ಸುರಿಸುತ್ತಾನೆ. ಆದರೆ ಮದುವೆಯ ಹೊಸತನದಲ್ಲಿ ಮಲ್ಲವ್ವ ತನಗೆ ಸರಿಯಾದ ಜೋಡಿಯಲ್ಲ ಎಂದು ಹೆಂಡತಿಯನ್ನು ನಡೆಸಿಕೊಳ್ಳುವ ರೀತಿ, ಶೋಕಿಲಾಲನಾಗಿ ಬೇರೆ ಹೆಣ್ಣುಗಳ ಜೊತೆ

---

೧೧. ಡಾ. ಕಮಲಾ ಹಂಪನಾ–ವೈಚಾರಿಕ ಪ್ರಬಂಧಗಳು: ಪುಟ ಸಂಖ್ಯೆ–೦೧ ಸಪ್ನ ಬುಕ್ ಹೌಸ್–೨೦೧೧

ಕೂಡುವ ರಸಿಕ ಮಹಾಶಯನಾಗಿರುತ್ತಾನೆ. ಬುದ್ಧಿ ಹೇಳಲು ಬಂದ ತನ್ನ ಮಾವನಿಂದ ಬೈಗುಳಗಳು ನಡೆದಾಗ ಅದಕ್ಕೆಲ್ಲಾ ಕಾರಣ ಹೆಂಡತಿ ಎಂದು ಮತ್ತೆ ಮಲ್ಲವ್ವನನ್ನು ಬಯ್ಯುತ್ತಾನೆ. ಅವನು ಬಯ್ಯುವ ಪರಿಯನ್ನು ಇಲ್ಲಿ ಕಾಣಬಹುದು.

"ಇದರವ್ವನಾ ಬಿಕನಾಸಿಗಿ ತಂದೂ... ಮೈ ಹಿಂಡದ್ರ ಒಂದು ಮುಟಗಿ ಖಂಡಾಯಿಲ್ಲ, ಘಾಣದ ಬಾಯಾಗಿಟ್ಟು ತಿರುಗಿಸಿದ್ರೂ ಒಂದು ಬಗಸಿ ರಕ್ತಾ ಬರಂಗಿಲ್ಲ ಸೊಟ್ಟ ಕುಂಡೀದು, ಒಣ ಮಾರಿದ್ದಕ್ಕೆ ತಂದು ನನ್ ಕುತಗಿಗಿ ಉರಲು ಹಾಕಿ ಹೋಗ್ಯಾನ ನಮ್ಮಪ್ಪ ಭ್ಯಾಡಾನ ಮಗ. ನಿನ್ನ ನೆತ್ತಿ ಮ್ಯಾಲಿ ಮೆಟ್ಟಾಡ್ಸಿ ಕೂದಲುದರಸ್ತಿನೇ ರಂಡೀ...ಇಲ್ಲ ಸಲ್ಲದ್ದೆಲ್ಲಾ ಹೇಳಿ ನಿಮ್ಮಪ್ಪಗ ಕರ್ಸಿ ನನಗ ಅಂಜಸಲಕ್ಕ ನೋಡ್ತ್ಯಾ ನಿನ್ನವ್ವನ ಭೋಸಡಿ ನಾ ಯಾ ನನ್ಮಗನಿಗೂ ಅಂಜಾ ಗಂಡಲ್ಲಂತ ತಿಳ್ಕೋ... ನಿನ್ ತಾಳಿ ಹರ್ಕೊಂಡು ಹಚಗುಡ್ತೀನಿ; ನಿನ್ನ ತವರುಮನಿಗಿ... ನನಗೇನು ನಿನ್ನಂತಾ ಮೆಟ್ಟುಗೋಳು ನನ್ ಕಾಲಿಗಿ ಬರಾವೇ ಸೊ...ಹೋಗಾವೇಸೊ...ನಾಯಿ ಮಾರೀದು ಇದರವ್ವನಾ..."[೧೨]

ಮದುವೆಯ ಹೊಸತರಲ್ಲಿ ಕಷ್ಟ ಅನುಭವಿಸಿದ್ದ ಮಲ್ಲವ್ವ ತದನಂತರ ಗಂಡನನ್ನು ಬುದ್ಧಿವಂತಿಕೆಯಿಂದ ತನ್ನ ದಾರಿಗೆ ಎಳೆದುಕೊಂಡು ಸುಖವಾಗಿ ಜೀವನವನ್ನು ಅನುಭವಿಸಿದ್ದಳು. ಮಕ್ಕಳು ಬೆಳೆದು ದೊಡ್ಡವರಾಗುವ ತನಕ ಯಾವುದೇ ಸಮಸ್ಯೆಗಳು ಇರಲಿಲ್ಲ. ಮೊದಲು ಮಗಳು ಶಾಣಮ್ಮನನ್ನು ತನ್ನ ಸಂಬಂಧಿಗೆ ಕೊಟ್ಟು ವಿವಾಹ ಮಾಡುತ್ತಾರೆ. ಮತ್ತೊಬ್ಬ ಮಗಳು ಕಾಶೀ ಸ್ವಲ್ಪ ಧೈರ್ಯತನದ ಹೆಣ್ಣು. ಕಪ್ಪಗಿದ್ದರೂ ಎಲ್ಲರನ್ನು ತನ್ನತ್ತ ಸೆಳೆಯುವ ಆಕರ್ಷಕ ಮೈ ಕಟ್ಟನ್ನು ಹೊಂದಿದ್ದಳು. ಇವಳು ಮೇಲು ಜಾತಿಯ ಲಿಂಗರಾಜನನ್ನು ಪ್ರೀತಿಸಿದಾಗ ತಮ್ಮ ದೊಡ್ಡ ಮಗಳು ಶಾಣಮ್ಮನ ಮನೆಯಲ್ಲಿ ಬಿಟ್ಟಿದ್ದರು. ಮದುವೆಯಾಗುವ ತನಕ ಹೆಣ್ಣು ಮಗಳು ತಾಯಿಗೆ ಕೆಲಸವನ್ನು ಮಾಡಿಕೊಡುತ್ತಾ ಸಹಾಯಕಳಾಗಬೇಕಿತ್ತು. ಆದರೆ ಆ ಭಾಗ್ಯವು ಮಲ್ಲಮ್ಮನಿಗೆ ಲಭಿಸುವುದಿಲ್ಲ. ಗೌರವಯುತವಾಗಿ ಮದುವೆಯನ್ನು ಮಾಡಿ ಕೊಟ್ಟಿದ್ದ ತಂದೆ ತಾಯಿಗಳ ಮರ್ಯಾದೆಗೆ ಕಪ್ಪು ಮಸಿಯನ್ನು ಬಳಿದು ತನ್ನ ಮಾಜಿ ಪ್ರಿಯಕರನ ಬಳಿ ಕಾಶಿ ಸೇರಿಕೊಳ್ಳುತ್ತಾಳೆ. ಇದರಿಂದ ಜಮಾದಾರ ಮಲ್ಲಪ್ಪನಿಗೆ ದಿಕ್ಕು ತೋಚದೆ ತೀವ್ರ ಅಸಮಾಧಾನ ಮತ್ತು ಅಗೌರವಕ್ಕೆ ತುತ್ತಾದ ಸ್ವಾಭಿಮಾನಿ ಹೊಳೆಗೆ ಹಾರಿ ಸಾಯುತ್ತಾನೆ.

ಹೆಣ್ಣಿಗೆ ಗಂಡ ಇರುವ ತನಕ ಮರ್ಯಾದೆ ಹಾಗು ಸುಖಕರವಾದ ಜೀವನ. ಆದರೆ ಮಲ್ಲವ್ವನಿಗೆ ಮೊದಲೇ ಮಲ್ಲಪ್ಪನು ತೀರಿಹೋಗಿ ದುಃಖವನ್ನು ಮತ್ತಷ್ಟು ಹೆಚ್ಚಿಸಿದ್ದನು. ಮಗ ಚೆನ್ನಾಗಿ ಸಾಕುತ್ತಾನೆ ಎಂದುಕೊಂಡರೆ ಕೊಲೆ ಆಪಾದನೆಯಲ್ಲಿ ಸಿಲುಕಿ ಮಗ ಕಲ್ಯಾಣಿ

---

೧೨. ಗೀತಾನಾಭೂಷಣ್-ಬದುಕು-ಪುಟಸಂಖ್ಯೆ ೦೯-ಲೋಯಯ ಪ್ರಕಾಶನ ೨೦೦೧

ಸೆರೆಮನೆ ವಾಸವನ್ನು ಅನುಭವಿಸುತ್ತಾನೆ. ಗಂಡನನ್ನು ಕಳೆದುಕೊಂಡು ಕೃಶವಾಗಿದ್ದ ಮಲ್ಲವ್ವ ಈಗ ಮಗನ ಜೈಲುವಾಸದಿಂದ ಕಂಗಾಲಾಗಿ ಆರೆಹುಚ್ಚಿಯಂತಾಗುತ್ತಾಳೆ. ಅಪಾರ ಯಾತನೆಗೊಳಗಾದ ಮಲ್ಲವ್ವ ಕಾಯಿಲೆಗೆ ತುತ್ತಾಗಿ ನೆಲ ಹಿಡಿಯುತ್ತಾಳೆ. ತತ್ಪರಿಣಾಮವಾಗಿ ದುಃಖಗಳಲ್ಲಿಯೇ ತನ್ನ ಬದುಕನ್ನು ಕೊನೆಗಾಣಿಸಿಕೊಳ್ಳುತ್ತಾಳೆ.

ಈ ಕಾದಂಬರಿಯಲ್ಲಿ ಬರುವ ಮತ್ತೊಂದು ಪಾತ್ರವೆಂದರೆ ಭಾಗವ್ವ. ಈಕೆ ಬಹಳ ವರ್ಷಗಳ ಹಿಂದೆಯೇ ಗಂಡನನ್ನು ಕಳೆದುಕೊಂಡಿದ್ದಳು. ತನಗೆ ಇದ್ದ ಒಬ್ಬನೇ ಒಬ್ಬ ಮಗನನ್ನು ಸಾಕಲು, ಅವನ ಬದುಕನ್ನು ಹಸನಾಗಿಸಲು ಬಹಳ ಕಷ್ಟವನ್ನು ಪಟ್ಟ ಹೆಣ್ಣು. ಮಗ ರಾಣಪ್ಪನನ್ನು ತನ್ನ ಉಡಿಯಲ್ಲಿ ಕಟ್ಟಿಕೊಂಡೇ ಮನೆ ಕೆಲಸಗಳನ್ನು ಮಾಡುತ್ತಾಳೆ. ಮನೆ ಕಟ್ಟುವ ಕೆಲಸಕ್ಕೆ ಹೋಗಿ ಅಲ್ಲಿ ಕಲ್ಲು, ಇಟ್ಟಿಗೆ, ಸಿಮೆಂಟು ಮೊದಲಾದವನ್ನು ಎತ್ತಿಕೊಡುವ ಕೆಲಸವನ್ನು ಮಾಡಿಕೊಂಡೇ ತನ್ನ ಮಗನನ್ನು ಬೆಳೆಸುತ್ತಾಳೆ. ಆದರೆ ಮಗ ಕೊನೆ ಕಾಲದಲ್ಲಿ ಇವಳನ್ನು ಸುಖವಾಗಿ ನೋಡಿಕೊಳ್ಳುವುದಿಲ್ಲ.

ಇದೇ ರೀತಿಯಾಗಿ ತನ್ನ ಬದುಕಿನಲ್ಲಿ ಗಂಡನನ್ನು ಕಳೆದುಕೊಂಡು ಒಂಟಿಯಾಗಿ ಜೀವನ ಮಾಡುವ ಮತ್ತೊಂದು ಹೆಣ್ಣು ತಾಯಮ್ಮ. ಲಿಂಗರಾಜನ ತೋಟದ ಕೆಲಸದಾಳು ಭೀಮಶ್ಯಾನ ಆಕ್ಕ ಈ ತಾಯಮ್ಮ. ಈಕೆಯು ಹರೆಯದಲ್ಲಿರುವಾಗಲೇ ಗಂಡನನ್ನು ಕಳೆದುಕೊಂಡು ವಿಧವೆಯಾಗಿರುತ್ತಾಳೆ. ಅರ್ಧ ಜೀವನವನ್ನು ಕಳೆದಿದ್ದ ತಾಯಮ್ಮನಿಗೆ ಮಕ್ಕಳಿರುವುದಿಲ್ಲ. ಗಂಡ ಸತ್ತಾಗ ಊಟಕ್ಕಾಗಿ ಗಂಡನ ಮನೆಯಲ್ಲೆ ಇದ್ದು ಅತ್ತೆ ಮಾವನ ಬಳಿ ಬೈಗುಳ ಕೇಳಬೇಕಾಗಿತ್ತು. ಭಾವ ಮೈದುನರು ಅಂದಿದ್ದೆಲ್ಲವನ್ನು ಅನ್ನಿಸಿಕೊಂಡು ಸುಮ್ಮನಿರಬೇಕಿತ್ತು. ಇಂತಹ ಕಿರುಕುಳವನ್ನು ತಾಳಲಾರದೆ ಇವರ ಗುಲಾಮಳಾಗಿ ಬದುಕುವುದಕ್ಕೆ ಇಷ್ಟಪಡದೆ ಅಲ್ಲಿಂದ ಹೊರಟು ತವರು ಮನೆಗೆ ಬಂದು ವಾಸ ಮಾಡುವುದನ್ನು ಕಾಣುತ್ತೇವೆ. ಇಲ್ಲಿ ಯಾರ ಹಂಗಲ್ಲಿಯೂ ಇರುವುದಕ್ಕೆ ಇಷ್ಟ ಪಡದೆ ಈಕೆ ತಾನೇ ಕೂಲಿನಾಲಿ ಮಾಡಿ ಹಣವನ್ನು ಸಂಪಾದಿಸಿ ತಮ್ಮನ ಕೈಗೆ ಕೊಡುತ್ತಾಳೆ. ಒಟ್ಟಿನಲ್ಲಿ ಹೆಣ್ಣು ಮದುವೆಯ ಬಂಧನಗಳಿಗೆ ಸಿಲುಕಿದ ಮೇಲೆ ವಿಚಿತ್ರವಾದ ಕಷ್ಟಗಳನ್ನು ಅನುಭವಿಸುತ್ತಾಳೆ. ಗಂಡ ಒಳ್ಳೆಯವನಿದ್ದರೆ ಜೀವನ ಸುಗಮ, ಕೆಟ್ಟವನಿದ್ದರೆ ಬಾಳು ದುರ್ಗಮ ಆದರೆ ಈ ರೀತಿ ಗಂಡನನ್ನು ಕಳೆದುಕೊಳ್ಳುವ ಹೆಣ್ಣಿನ ಬಾಳು ಇನ್ನೂ ಕಷ್ಟವಾಗಿರುತ್ತದೆ.

ಸಂಸಾರದ ಸುಖದುಃಖಗಳನ್ನು ಅರಿತು ದುಡಿದು ಸಂಪಾದಿಸಿ ಮನೆಯನ್ನು ನೋಡಿಕೊಳ್ಳುವ ಗಂಡನಿದ್ದರೆ ಹೆಣ್ಣಿಗೆ ನೆಮ್ಮದಿ ಸಿಗುತ್ತದೆ. ಗಂಡ ದುಡಿದು ತಿನ್ನಲು ಬಾರದ ನಿಷ್ಪ್ರಯೋಜಕನಾಗಿ, ಸೋಮಾರಿಯಾಗಿದ್ದರೆ ಅಂತಹ ಗಂಡನನ್ನು ಪಡೆದ ಹೆಣ್ಣಿನ ಬಾಳು

ಬಹಳ ಕ್ರೂರವಾಗಿರುತ್ತದೆ. ಈ ನೆಲೆಯಲ್ಲಿ ತಾನೇ ಮನೆಯ ಜವಬ್ದಾರಿಗಳೆಲ್ಲವನ್ನು ಹೊತ್ತುಕೊಂಡು ಮನೆಯನ್ನು ನಿಭಾಯಿಸುತ್ತಾಳೆ. ನಾಲ್ಕು ಜನರು ಬಾಯಿ ಮೇಲೆ ಬೆರಳಿಟ್ಟು ಆಶ್ಚರ್ಯ ಪಡುವ ರೀತಿಯಲ್ಲಿ ಬಾಳುತ್ತಾಳೆ. ಈ ಕಾದಂಬರಿಯಲ್ಲೂ ಕೂಡ ಅಂತಹ ಚಿತ್ರಣವನ್ನು ಕಾಣಬಹುದು.

ಮದುವೆಯಾದ ಹೆಣ್ಣು ಗಂಡ ಎಂತಹ ಕ್ರೂರವಾದ ವರ್ತನೆಯನ್ನು ತೋರಿದರೂ, ಹಿಂಸಿಸಿದರೂ ಅವನ ಬಳಿಯೆ ಕಡೆಯ ತನಕ ಬಾಳಬೇಕು ಎಂಬಂತೆ ನಮ್ಮ ಸಮಾಜವು ರೂಪುಗೊಂಡಿದೆ. ಅವನ ವಿಚಿತ್ರ ಹಿಂಸೆಗಳನ್ನು ತಾಳಬೇಕಾಗಿದೆ. ಕಲ್ಲವ್ವ ಇಂತಹ ಸಮಸ್ಯೆಗೆ ಸಿಲುಕಿ ಒದ್ದಾಡುವ ಹೆಣ್ಣು. ಮೂಕನಾತ ಎನ್ನುವವನು ಸೆಂಧಿಯನ್ನು ಕುಡಿಯುವುದೇ ತನ್ನ ಜೀವನವೆಂದು ತಿಳಿದವನು. ಎಲ್ಲರೂ ಮೂಕ್ಯಾ ಅಂತಲೇ ಕರೆಯುತ್ತಾರೆ. ಇವನೊಬ್ಬ ಮುಂಜಾನೆಯಿಂದ ರೈಗಿನವರೆಗೂ ಕುಡಿಯುವ ಹುಟ್ಟು ಕುಡುಕ. ಜೊತೆಗೆ ಕಾಮಪಿಶಾಚಿ. ಊರಿನ ಸುಂದರ ಹೆಣ್ಣು ಮಕ್ಕಳು, ಜೋಗಣಿಯರು, ಸಾನೇರು ಇವೆರೆಲ್ಲರ ಜೊತೆ ಕೂಡಬೇಕೆಂಬ ಆಸೆವುಳ್ಳವನು. ಜೋಗಣಿಯರ ಬಳಿ ಹೋಗಲು ಹಣವಿಲ್ಲದೆ ತನ್ನ ಹೆಂಡತಿ ಕಲ್ಲವ್ವನನ್ನೇ ತಾನು ಇಷ್ಟಪಟ್ಟ ಜೋಗಣಿ ಅಂದುಕೊಂಡು, ಸೂಳೆಗೇರಿಯ ಹೆಣ್ಣೆಂದು ಭಾವಿಸಿ ವಿಕೃತ ಕಾಮಿಯ ಹಾಗೆ ನಡೆದುಕೊಳ್ಳುತ್ತಾನೆ. ಇವನ ಅತಿಕಾಮುಕತನದ ಫಲವಾಗಿಯೋ ಏನೋ ಎಂಬಂತೆ ಕಲ್ಲವ್ವನಿಗೆ ಯಾವಾಗಲೂ ತುಂಬಿದ ಹೊಟ್ಟೆಯೇ. ಆರು ತಿಂಗಳ ಕೂಸು ಮೂರು ತಿಂಗಳ ಹೊಟ್ಟೆ ಎಂದು ಊರಿನ ಜನರೆಲ್ಲರೂ ಜರಿದು ಆಡಿಕೊಳ್ಳುವ ಹಾಗೇ ಆಗಿತ್ತು ಇವಳ ಜೀವನ.

ಆಡುವವರ ಬಾಯಿಗೆ ಆಡುಮಾತಾಗಿದ್ದ ಕಲ್ಲವ್ವನಿಗೆ ಆರು ಜನ ಮಕ್ಕಳಿದ್ದು ಅವರನ್ನು ಸಾಕಲು ಹುಟ್ಟಿಸಿದ ತಂದೆಗೆ ಜವಬ್ದಾರಿಯಿರಲಿಲ್ಲ. ಕಲ್ಲವ್ವನೇ ಚಿಕ್ಕ ಮಕ್ಕಳನ್ನಿಟ್ಟು ಕೊಂಡು ಕೆಲಸಕ್ಕೆ ಹೋಗುತ್ತಿದ್ದಳು. ಬಾಣಂತನ ಆದ ಎರಡೇ ತಿಂಗಳಿಗೆ ಕೂಲಿ ಕೆಲಸಕ್ಕೆ ಹೋದರೆ ಊರಿನ ಜನ ಮುಖಕ್ಕೆ ಬಡಿಯುವ ಹಾಗೆ ಮಾತನಾಡಿಕೊಳ್ಳುತ್ತಿದ್ದರು, ಹೀಯಾಳಿಸುತ್ತದ್ದರು. ನೀವಿಬ್ಬರೂ ಮಕ್ಕಳನ್ನು ಹಡೆಯುವುದಕ್ಕಾಗಿಯೇ ಹುಟ್ಟಿರುವಿರೆಂದು ಹೇಳುತ್ತಿದ್ದರು. ಇವರ ಮಾತುಗಳಿಗೆ ತನ್ನ ಕಣ್ಣೀರೇ ಉತ್ತರವೆಂದು ಗೋಳಾಡುತ್ತಿದ್ದಳು. ರಾತ್ರಿ ಗಂಡ ಬಂದಾಗ ತಿರಸ್ಕರಿಸಬೇಕೆಂದವರಿಗೆ ಕಲ್ಲವ್ವ ಈ ರೀತಿಯಾಗಿ ತನ್ನ ದುಃಖ ತೋಡಿಕೊಳ್ಳುತ್ತಿದ್ದಳು. "ಬ್ಯಾಡಂದ್ರೆ ಕೈಯಾಗ ಸಿಕ್ಕ ಕಟಗಿ, ಒಣಕಿ ಕುಡಿಗಿಲಾ...ಸಿಕ್ಕಿದ್ದು ತಗೊಂಡು ಹೋಡಿತಾನೆ ಅಯೀ...ಮನ್ನ ರಾತರಿ ಹಂಗೇ ಆಯ್ತು. ನನಗ ಹೊಡ್ಯಾ ಮುಂದ ಮಕ್ಕಳಿಗಿನೂ ಪೆಟ್ಟು ಬಿದ್ದು ಮಕ್ಕೊಂಡಿದ್ದ ಮಕ್ಕಳೆಲ್ಲಾ ಎದ್ದು ಗೋಳೋ ಅಂತ ಅಳ್ಳಕತ್ತಿದ್ದವು. ಅವಕ್ಕೆಲ್ಲಾ ಮತ್ತೀಟು ಹೊಡ್ದು, ಬೆದರಿಸಿ ಮಲಗಿಸಿ ಮತ್ತ ನನಗ ತೆಕ್ಕಿಗೆಳ್ಕೊಂಡನವ್ವ...ಅವನ ಸಂತಾಪ್ಲೀ...ನಂದು ನಿನಗೆ ಬ್ಯಾಡಾಗ್ಯಾದೇನೇ ಪಾದರಗಿತ್ತೀ... ಮತ್ತ್ಯಾಂವ ಮಿಂಡಗ

ಸವರಸ್ಗೊಂಡಿದ್ದೇ ರಂಡೀ" ಅಂತಂದು ಕಿಪ್ಪಡಿ ಮ್ಯಾಲೆ ಒದ್ದನವ್ವ ಎಂದು ಹೇಳಿ ದೇವರ ನನಗ ಮರಣರೇ ಕುಡಂಗಿಲ್ಲಾಗ್ಯಾನ ನೋಡು ಜಲ್ದಿ..." ಎಂದು ತನ್ನ ಮಕ್ಕಳು ಮತ್ತು ಹೊಟ್ಟೆ ಬಸುರಿನ ಬಗ್ಗೆ ನೋವು ತುಂಬಿದ ಧ್ವನಿಯಲ್ಲಿ ತೋಡಿಕೊಳ್ಳುವ ಆಕೆಯ ಆರ್ತನಾದ ಎಂತಹ ಕಲ್ಲು ಹೃದಯದವರನ್ನು ಕರಗಿಸುತ್ತದೆ.

ಗಂಡನಿಂದ ದೂರ ಹೋಗೋಣವೆಂದರೆ ಮಕ್ಕಳ ಸೆಳೆತ. ಹಾಗಾಗಿ ನೋವಿನಲ್ಲಿಯೇ ದಿನಗಳನ್ನೂ ದೂಡುತ್ತಿದ್ದಳು. ಹಠಮಾರಿ ಹೆಣ್ಣಾದ ಈಕೆ ಯಾರ ಮರ್ಜಿಗೂ ಒಳಗಾಗದೆ ತಾನೇ ದುಡಿದು ಗಂಡ ಮಕ್ಕಳು ಸಂಸಾರವನ್ನು ನಿಭಾಯಿಸುವ ದಿಟ್ಟತನದ ಹೆಣ್ಣು ಆಗಿದ್ದಳು. ಆದರೆ ಗಂಡ ಕುಡಿದು ಕುಡಿದು ಮನೆಯನ್ನೆಲ್ಲಾ ಖಾಲಿ ಮಾಡುತ್ತಾ ಬರಿದಾಗಿಸುತ್ತಿದ್ದನು. ತಾನು ದುಡಿದು ತರುವುದು ಇವನು ಹಾಳು ಮಾಡುವುದು ಎಂಬಂತಾಗಿತ್ತು. ಆದರೆ ಇವನ ವಿಚಿತ್ರ ವ್ಯಾದಿಯನ್ನು ಸಹಿಸಲು ಅಸಾಧ್ಯವಾಗಿತ್ತು. ತುಂಬು ಬಸುರಿಯಾಗಿದ್ದ ಸಂದರ್ಭದಲ್ಲೂ ಪ್ರತಿ ರಾತ್ರಿಯೂ ಕ್ರೂರವಾಗಿ ವರ್ತಿಸುತ್ತಿದ್ದನು. ಇವನ ಕಾಮದಾಹಕ್ಕೆ ಸಿಲುಕಿದ್ದ ಕಲ್ಲವ್ವನ ದೇಹ ರಕ್ತವಿಲ್ಲದಂತಾಗಿ ಬರಿ ಮೂಳೆಗಳಲ್ಲಿ ಮಾತ್ರ ಇದ್ದಳು.

ಒಂದು ದಿನ ರಾತ್ರಿ ಹೆಚ್ಚಾಗಿ ಕುಡಿದು ಬಂದಿದ್ದ ಮೂಕ್ಯಾನು ಹೊಟ್ಟೆ ತುಂಬ ತಿಂದು ತನ್ನ ಕಾಮದಾಹವನ್ನು ತೀರಿಸಿಕೊಳ್ಳಲು ಹೆಂಡತಿಯ ಬಳಿ ಬರುತ್ತಾನೆ. ಆರು ಮಕ್ಕಳ ತಾಯಿ ಹೊಟ್ಟೆಯಲ್ಲಿ ಮತ್ತೊಂದು ಮಗು ಇದರಿಂದ ಆಕೆ ದೇಹ ರಕ್ತವಿಲ್ಲದೆ ನಿತ್ರಾಣವಾಗಿರುತ್ತದೆ. ಹೊಟ್ಟೆಗೆ ಸರಿಯಾಗಿ ಊಟವಿಲ್ಲ. ಪ್ರತಿದಿನವೂ ದುಡಿತ. ಇದರಿಂದಾಗಿ ಇವಳು ಹಿಂಡಿ ಹಿಂಡಿ ಹಿಪ್ಪೆ ಮಾಡಿದ ಹಣ್ಣಿನ ಹಾಗಾಗಿದ್ದಳು. ಅದ್ಯಾವುದನ್ನು ನೋಡದೆ ತನ್ನ ಕಾಮದ ಕಣ್ಣುಗಳಿಂದ ಹೋಗಿ ಕಲ್ಲವ್ವನ ಮೇಲೆರಗುತ್ತಾನೆ. ತನ್ನ ಹೊಟ್ಟೆಯಲ್ಲಿರುವ ಮಗುವಿನ ಬಗ್ಗೆ ಹೇಳಿದರೂ, ತನ್ನ ಅನಾರೋಗ್ಯದ ಬಗ್ಗೆ ಸೂಚನೆ ನೀಡಿದರೂ ಇದ್ಯಾವುದು ಅವನ ಕಿವಿಯ ಮೇಲೆ ಬೀಳುತ್ತಲೆ ಇರಲಿಲ್ಲ. ನಾ ಸತ್ತೇ ಹೋಗ್ತೀನೀ...ತನ್ನನ್ನೂ ಬಿಡು ಎಂದು ಬೇಡಿಕೊಳ್ಳುತ್ತಾಳೆ. ಯಾರಾದರೂ ಜೋಗಿಣಿಯ ಬಳಿ ಹೋಗು ಎಂದು ಗೋಳಾಡುತ್ತಾಳೆ. 'ಯವ್ವೋ...ಯಾರರೇ ನನಗ ಉಳಸ್ಗೋರ್‍ರೇಯಪ್ಪಾ ಎಂದು ನರಳಾಡುತ್ತಾಳೆ. ಹೀಗಿದ್ದರೂ ಸಹ ಕುಡಿತದ ಅಮಲಿನಲ್ಲಿದ್ದ ಅವನು ಕಾಡು ಮೃಗದಂತೆ ವರ್ತಿಸಿವುದನ್ನು ಕಾಣುತ್ತೇವೆ. ಮಾತ್ರವಲ್ಲ; ಇವನ ವಿಕೃತ ಕಾಮಕ್ಕೆ ಒಳಗಾಗಿ ಕಲ್ಲವ್ವ ವಿಕಾರವಾಗಿ ಕೂಗುತ್ತಲೇ ಬದುಕಿನ ಅಂತ್ಯ ಹಾಡುವುದು ಗಂಡನ ಕ್ರೂರ ಕಾಮಕೃತ್ಯಕ್ಕೆ ಮಾರ್ಮಿಕ ಉತ್ತರವಾಗಿದೆ.

ಸಂಸಾರದ ಬಂಧನಗಳಿಗೆ ಸಿಲುಕಿದ್ದ ಕಲ್ಲವ್ವ ಪ್ರಶ್ನೆ ಮಾಡುವ, ಗಂಡನನ್ನು ತಿರಸ್ಕರಿಸುವ ಸ್ಥಿತಿಯಲ್ಲಿ ಇರಲಿಲ್ಲ. ತನ್ನ ಗಂಡನ ಕಾಮ ಪಿಶಾಚಿತನಕ್ಕೆ ತಾನೇ ಬಲಿಯಾಗಿ ಮಕ್ಕಳನ್ನು ಅನಾಥ ಮಾಡಬೇಕಾಗುತ್ತದೆ. ಮೂಕ್ಯಾನಿಗಿಂತಲೂ ವಿಚಿತ್ರವಾದ ಗಂಡಸರು ಇದ್ದಾರೆ. ಅದೆಲ್ಲಕ್ಕೂ ಬಲಿ ಹೆಣ್ಣೇ. ಕೆಲವು ಗಂಡಸರು ಹಣದ ಆಸೆಗಾಗಿ ಊರ ಸಾವ್ಕಾರನಿಗೋ, ಗೌಡನಿಗೋ, ಕುಳ್ಕುಣಿಗೋಳಿಗೊ ತಮ್ಮ ಹರೆಯದ ಹೆಂಡತಿಯರನ್ನು

ಬಲವಂತವಾಗಿ ದೂಡುವುದನ್ನು, ಇದ್ಯಾವುದನ್ನು ಎದುರಿಸಲಾಗದೆ, ಪ್ರತಿಭಟಿಸಲು ಸಾಧ್ಯವಾಗದೆ ಪರಪುರಷರ ವಸ್ತುವಾಗುವುದನ್ನು ಕಾಣಬಹುದು.

ಗಂಡು ಬೇರೋಬ್ಬನ ಬಳಿ ನೂಕಿದಾಗಲು ಹೆಣ್ಣು ಕಷ್ಟ ಪಡುತ್ತಾಳೆ. ಗಂಡ ಬೇರೋಬ್ಬಳ ಹಿಂದೆ ಹೋದಾಗಲು ಹೆಣ್ಣು ವೇದನೆಗೊಳಗಾಗುತ್ತಾಳೆ. ಗಂಡ ಸತ್ತ ಹೆಣ್ಣು ಮದುವೆಯಾಗುವ ಹಾಗೇ ಇಲ್ಲ ಆದರೆ ಹೆಂಡತಿ ಸತ್ತರೆ ಗಂಡ ಮರುವಿವಾಹವಾಗುತ್ತಾನೆ. ಹೆಂಡತಿ ಬದುಕಿರುವಾಗಲೆ ಮತ್ತೊಂದು ಹೆಣ್ಣಿನ ಜೊತೆ ಸಂಬಂಧವನ್ನು ಹೊಂದುತ್ತಾನೆ. ಊರಿನ ಶ್ರೀಮಂತ ವರ್ಗದವರು ಮನೆಯಲ್ಲಿ ಹೆಂಡತಿ ಇದ್ದರೂ ಕೆಳ ವರ್ಗದ ಮಹಿಳೆಯರನ್ನು ಜೋಗಿಣಿ ಮಾಡಿ ಅದಕ್ಕೆ ತಗುಲುವ ವೆಚ್ಚವನ್ನು ತಾವೇ ಬರಿಸಿ ಆ ಹೆಣ್ಣಿನ ಮೈಯ ಮೀಸಲನ್ನು ಮುರಿಯುತ್ತಿದ್ದರು. ಈ ಸಂದರ್ಭದಲ್ಲಿ ತಮ್ಮ ಹೆಂಡತಿಯರ ಬಾಳೇನು, ಅವರ ಮನಸ್ಸಿಗೆ ಆಗುವ ದುಃಖವೇನು ಎಂದು ಯೋಚನೆಯು ಕೂಡ ಮಾಡುವುದಿಲ್ಲ. ಇದು ಇಂದಿಗೂ ಪ್ರಸ್ತುತದಲ್ಲಿರುವ ಸಮಸ್ಯೆಯಾಗಿದೆ.

ಜಮಾದಾರ ಮಲ್ಲಪ್ಪನು ಕೂಡ ಊರಿನ ಗೌರವಯುತ ವ್ಯಕ್ತಿಯಾಗಿದ್ದರೂ ಹೆಣ್ಣಿನ ಚಪಲತೆಗೇನೂ ಕಡಿಮೆ ಇರಲಿಲ್ಲ. ಆ ಕಾರಣದಿಂದಲೇ ಮದುವೆಯ ಹೊಸತರಲ್ಲಿ ಗಂಡ ಹೆಂಡತಿಯರ ನಡುವೆ ವೈಮನಸ್ಯಗಳು ಮೂಡುತ್ತವೆ. ಮಲ್ಲಪ್ಪ ಕೊರವರ ಈರಮ್ಮ ಎನ್ನುವ ಹೆಣ್ಣಿನ ಜೊತೆ ಸಂಬಂಧವನ್ನು ಬೆಳೆಸಿಕೊಳ್ಳುತ್ತಾನೆ. ಈರವ್ವನ ಗಂಡ ಹಾವಿನ ಕಡಿತಕ್ಕೆ ತುತ್ತಾಗಿ ಸಾವನ್ನಪ್ಪಿದ್ದು ಇಂತಹ ಈರವ್ವನಿಗೆ ಒಂದು ಬಾಳು ಈತನಿಂದ ಸಿಗುತ್ತದೆ. ಆದರೆ ಹೆಂಡತಿಯ ಗತಿ ಅವಳ ನೋವು ಇದರ ಬಗ್ಗೆ ತಲೆ ಕೆಡಿಸಿಕೊಳ್ಳುವುದಿಲ್ಲ. ಮಲ್ಲವ್ವ ಮೊದಮೊದಲು ಈರವ್ವನನ್ನು ಜರಿಯತೊಡಗಿದ್ದಳು. ಇವಳು ತನ್ನ ಗಂಡನಿಗೆ ಎಲ್ಲಿಂದ ಬಂದು ಗಂಟು ಬಿದ್ದಳೋ ಎಂದು ಬೈದುಕೊಳ್ಳುತ್ತಿದ್ದಳು. ತರುವಾಯದಲ್ಲಿ ತಾನೇ ಹೊಂದಾಣಿಕೆಯ ಜೀವನಕ್ಕೆ ಕೈ ಜೋಡಿಸಿದ್ದಳು. ಇದರ ಪರಿಣಾಮವಾಗಿ ಮಲ್ಲಪ್ಪನಿಗೆ ಎರಡು ಸಂಸಾರಗಳು ಎನ್ನುವ ರೀತಿ ಆಗಿತ್ತು. ಜನಪದರಲ್ಲಿ ಇರುವ ನಂಬಿಕೆಯ ಹಾಗೆ ಗಂಡು ತಾಮ್ರದ ಕೊಡದಂತೆ; ಮಲಿನಗೊಂಡರೆ ಹುಳಿ ಹಚ್ಚಿ ಬೆಳಗಿ ಒಳಗಿಟ್ಟುಕೊಳ್ಳುವಂತೆ ದಾರಿ ಬಿಟ್ಟ ಗಂಡನನ್ನು ಸಹಿಸಿಕೊಳ್ಳಬಹುದು. ಆದರೆ ಹೆಣ್ಣು ಮಣ್ಣಿನ ಕೊಡದಂತೆ ಒಮ್ಮೆ ಮಲಿನಗೊಂಡರೆ ಮುಗಿಯಿತು. ಅದು ಬಳಕೆಗೆ ಯೋಗ್ಯವಲ್ಲ. ಅದನ್ನು ಒಡೆದು ತಿಪ್ಪೆಗೆ ಬಿಸಾಕಬೇಕು ಎಂದು ಭಾವಿಸಲಾಗುತ್ತದೆ. ಇಂತಹದೇ ಪರಿಯನ್ನು ಕಾದಂಬರಿಯಲ್ಲಿ ಕಾಣಬಹುದಾಗಿದ್ದು, ಮಲ್ಲಪ್ಪನು ಮಾಡುವ ಎಲ್ಲವನ್ನೂ ಸಹಿಸಿಕೊಳ್ಳುವ ಆತನ ಹೆಂಡತಿ ಕ್ಷಮಯಾ ಧರಿತ್ರಿಯಾಗಿ ಕಾಣಬಹುದಾಗಿದ್ದು, ಮಲ್ಲಪ್ಪನ ಎಲ್ಲವನ್ನೂ ಸಹಿಸಿಕೊಳ್ಳುವ ಆತನ ಹೆಂಡತಿ ಕ್ಷಮಾಯಾಧರಿತ್ರಿಯಾಗಿ ಕಂಡುಬರುತ್ತಾಳೆ.

ನಕ್ಕರೆ ನಗಲೇಳು ನಗೆ ಮೊಗದ ಕ್ಯಾದಿಗೆ,
ನಾ ಮೆಚ್ಚಿ ಮುಡಿದ ಪರಿಮಳದಾ ಹೂವಾ
ಅವಳೊಂದು ಚಣಕಾಲ ಮುಡಿಯಾಲಿ[೧೩] ಎನ್ನುವಂತೆ

ತನ್ನ ಗಂಡ ಇನ್ನೊಬ್ಬಳೊಂದಿಗೆ ಸರಸವಾಡುವುದನ್ನು, ದೇಹ ಹಂಚಿಕೊಳ್ಳುವುದನ್ನು ಸಹಜವೆಂಬಂತೆ ಭಾವಿಸಬೇಕಾಗಿದೆ. ಒಳಗೆ ಏನೆಲ್ಲಾ ದುಃಖವನ್ನು ಹೊಂದಿದ್ದರೂ ತನಗೆ ತಾನೇ ಸಾಂತ್ವನಿಸಿಕೊಳ್ಳಬೇಕಾದಾಗ ಅವಳಿಂದ ಹೊರಹೊಮ್ಮಿರುವ ಪ್ರತಿಕ್ರಿಯೆಗಳಾಗಿವೆ. ಯಾವುದೇ ಹೆಣ್ಣು ತನ್ನ ಗಂಡ ಬೇರೊಬ್ಬ ಹೆಣ್ಣಿನ ಜೊತೆಯಲ್ಲಿ ಚಕ್ಕಂದವಾಡುವುದನ್ನು ಸಹಿಸಿಕೊಳ್ಳುವುದಿಲ್ಲವೆನ್ನುವುದು ಸರ್ವೇಸಾಮಾನ್ಯ.

ಕಾದಂಬರಿಯಲ್ಲಿ ಚಿತ್ರಿತವಾಗಿರುವ ಲಿಂಗರಾಜನ ಹೆಂಡತಿಯದು ಇದೇ ಬಗೆಯ ದುಃಖವಾಗಿದೆ. ವಿವಾಹಕ್ಕೆ ಮೊದಲು ಪ್ರೀತಿಸಿದವಳನ್ನು ತನ್ನ ಗಂಡ ಲಿಂಗರಾಜ ಇಟ್ಟುಕೊಂಡಾಗ ಲಿಂಗರಾಜನ ಹೆಂಡತಿ ನೀಲವ್ವ ಮನದಲ್ಲಿಯೆ ಕುದಿಯುತ್ತಾಳೆ. ಇವಳದ್ದು ಕೂಡ ಅಸಹಾಯಕತೆಯೇ ಆಗಿದೆ. ಪ್ರಾರಂಭಿಕ ಹಂತದಲ್ಲಿ ಏನೆಲ್ಲ ಪಂಚಾಯ್ತಿಗಳಾದರೂ ಅದಕ್ಕೆ ಲಿಂಗರಾಜ ಕಿಮ್ಮತ್ತೆ ಕೊಡುವುದಿಲ್ಲ. ಬಾಲ್ಯದಿಂದಲೂ ಕಷ್ಟದಲ್ಲೇ ಬೆಳೆದಿದ್ದ ಕಮಲಾಳದು ಮತ್ತೊಂದು ಬಗೆ. ವಿವಾಹವಾದ ಮೂರು ವರ್ಷಗಳ ನಂತರ ಕಿರುಕುಳ ಕೊಡಲು ಪ್ರಾರಂಭಿಸಿದ್ದ ಗಂಡ ಇನ್ನೊಬ್ಬಳ ಜೊತೆ ಅಕ್ರಮ ಸಂಬಂಧ ಬೆಳೆಸಿದಾಗ ಜಗಳವಾಗುತ್ತದೆ. ಅಳು ನರಳಾಟ, ಹೊಡೆಯುವುದು, ಬೈಯುವುದು ಪ್ರತಿದಿನದ ಕಾರ್ಯ ಚಟುವಟಿಕೆಗಳಾದಾಗ ಗಂಡನನ್ನು ಧೈರ್ಯಮಾಡಿ ಕೇಳಿದಕ್ಕೆ 'ನಾ ಅಕೀಗಿ ಇಟ್ಗೊಂಡೀನಿ ನೋಡು. ನೀ ಏನು ಮಾಡಕ್ಕೀಗ? ಬೇಕಾದ್ರ ನನ್ ಜೋಡಿ ಸಂಸಾರ ಮಾಡು, ನಾಹೇಳ್ದಂಗ ಕೇಳ್ಕೋತ ನಾಯಿ ಬಿದ್ದಂಗ ಬಿದ್ದಿರು ನನ್ನ ಮನ್ಯಾಗ. ನಾ ಮನಸ್ಸು ಬಂದಾಗ ಬರ್ತೀನಿ ಬರಲಾರ್ದಾಗ ಇಲ್ಲ. ನಾ ಹಾಕ್ದೋಟ ತಿಂದು ಹೇಳ್ದೋಟು ಕೇಳ್ಕೊಂಡು ಇರಂಗಿದ್ದರ ಇರು. ಬ್ಯಾಡಂದ್ರ ನಾ ಕಟ್ಟಿದ ತಾಳಿ ನಾ ಹರ್ಕೋತಿನಿ. ಬಿಟ್ಟು ಹೋಗು.. ಎಂದು ಮುಲಾಜಿಲ್ಲದೆ ಮಾತನಾಡಿದಾಗ ಅವನ ಗುಲಾಮಳಾಗಿ ಬಾಳುವ ಬದಲು ಒಬ್ಬಂಟಿಯಾಗಿ ಬದುಕಬಹುದೆಂದು ಭಾವಿಸಿ ಅಲ್ಲಿಂದ ಹೊರಟು ಹೋಗುವುದನ್ನು ಕಾಣುತ್ತೇವೆ. ಬದುಕಿನ ನಡವಳಿಕೆಯ ಸಂದರ್ಭಗಳನ್ನು ಸ್ಥೂಲವಾಗಿ ನೋಡುತ್ತಾ ಬಂದರೆ ಹೆಣ್ಣಿನ ಕುರಿತಂತೆ ಇಬ್ಬಗೆ ನೀತಿಗಳು ಇರುವುದನ್ನು ಕಾಣುತ್ತೇವೆ. ಗಂಡನ ಅನೈತಿಕ ಅತಿರೇಕಗಳನ್ನು ಹೆಂಡತಿ ಸಹಿಸುತ್ತಾಳೆಂದರೆ ಅದು ಆತ್ಮೀಯ ಭಾವವಾಗಿರುವುದಿಲ್ಲ. ಬದಲಾಗಿ ಅದು ಅನಿವಾರ್ಯವಾಗಿರುತ್ತದೆ. ಹೆಣ್ಣು ಸಂಸಾರದ ಬಂಧನಗಳಲ್ಲಿ ಸಿಲುಕಿದ ಮೇಲೆ ಏನೆಲ್ಲಾ ಅನಾಚಾರ ಕೃತ್ಯಗಳನ್ನು ಕಣ್ಣಿದ್ದು ಕುರುಡಿಯಾಗಿ, ಕಿವಿಯಿದ್ದು ಕಿವುಡಿಯಾಗಿ ಬದುಕನ್ನು ಸಾಗಿಸಬೇಕಾಗುತ್ತದೆ. ಕಾದಂಬರಿಯಲ್ಲಿನ ಬಹುತೇಕ ಹೆಣ್ಣಿನ ಪಾತ್ರಗಳು ಇದೇ ಬಗೆಯವಾಗಿವೆ.

---

೧೩. ಹಾಲತಿ ಸೋಮಶೇಖರ್–ಮಹಿಳಾ ಚಳುವಳಿ: ಸಾಮಾಜಿಕ ಮತ್ತು ಸಾಂಸ್ಕೃತಿಕ ಹಿನ್ನಲೆ: ಪುಟ ಸಂಖ್ಯೆ–೨೧೪ ವಿಸ್ಮಯ ಪ್ರಕಾಶನ: ೨೦೦೭

# ಅಧ್ಯಾಯ – ೭

## ಬದುಕು ಕಾದಂಬರಿಯಲ್ಲಿ ವ್ಯಕ್ತಗೊಂಡ ಸ್ತ್ರೀ ದಿಟ್ಟತನ

ಭಾರತೀಯ ಸಾಮಾಜಿಕ ವ್ಯವಸ್ಥೆಯು ಹೆಣ್ಣನ್ನು ಧರ್ಮಸೂತ್ರಗಳ ಮೂಲಕ ನಿಯಂತ್ರಣದಲ್ಲಿ ಇರಿಸಿಕೊಂಡಿದೆ. ಧರ್ಮಶಾಸ್ತ್ರಗಳ ಕಟ್ಟು ಪಾಡುಗಳಲ್ಲಿ ಹೆಣ್ಣನ್ನು ಬಂಧಿಸಿದೆ. ಹೆಣ್ಣಿಗೆ ಧರ್ಮವೇ ಸೆರೆವಾಸದ ಸೋಪಾನವಾಗಿದೆ. ಇಂತಹ ಕಟ್ಟುಪಾಡುಗಳಲ್ಲಿ ಸಿಲುಕಿ ನರಳಿದ ಹೆಣ್ಣಿಗೆ ಸ್ವತಂತ್ರ ಹಕ್ಕಿಯ ಹಾಗೆ ಹಾರಾಡುವ ಮನಸ್ಸುಗಳಿದ್ದರೂ ದಾರಿಗಳಿಲ್ಲ. ಎಲ್ಲಾ ದಾರಿಗಳು ಮುಚ್ಚಲ್ಪಟ್ಟಿದ್ದು, ನಾಲ್ಕೂ ಗೋಡೆಯ ನಡುವಿನದೇ ಅವಳ ಅಂತಿಮ ಬದುಕಾಗಿದೆ.

ಆದರೆ ಇತ್ತೀಚಿನ ದಿನಮಾನಗಳಲ್ಲಿ ಪುರುಷ ಪ್ರಧಾನ ವ್ಯವಸ್ಥೆಯ ಎಲ್ಲಾ ಬಂಧನಗಳನ್ನು ಕಳಚಿ ಹೋರಾಟದ ದಿಸೆಯಲ್ಲಿ ಸಾಗಿರುವ ಸ್ತ್ರೀಯರು ತಮ್ಮ ಅಸ್ಥಿತ್ವವನ್ನು ಕಂಡುಕೊಳ್ಳುವಲ್ಲಿ ಯಶಸ್ವಿಯಾಗುತ್ತಿದ್ದಾರೆ. 'ಬದುಕು' ಕಾದಂಬರಿಯಲ್ಲಿ ಸಾಮಾಜಿಕ ಆಚರಣೆಗಳಿಗೆ ಸಿಲುಕಿ ಮೂಢನಂಬಿಕೆಗಳ ನೆಲೆಯಲ್ಲಿ ಬಂಧಿತಳಾಗಿ 'ಜೋಗಿಣಿ'ಯಾಗಿ ಸೂಳೆಗಾರಿಕೆಯಂತಹ ಕೆಲಸಕ್ಕೆ ತನ್ನನ್ನು ತಾನು ತೆತ್ತುಕೊಳ್ಳಬೇಕಾಗಿತ್ತು. ತೆತ್ತುಕೊಂಡಿದ್ದರು. ಕಾಲ ಬದಲಾದಂತೆ ಬದಲಾವಣೆಯ ಗಾಳಿಗೆ ತಮ್ಮನ್ನು ಒಪ್ಪಿಸಿಕೊಂಡ ಪರಿಣಾಮದಲ್ಲಿ ಅಲ್ಲಿನ ಸ್ತ್ರೀಯರು ಇಂತಹ ಮೂಢನಂಬಿಕೆಯ ವಿರುದ್ಧ ತಿರುಗಿಬಿದ್ದಿರುವುದನ್ನು ಕಾಣಬಹುದು. ಇವರ ಈ ದಿಟ್ಟತನಗಳು ಬಾಲ್ಯದಿಂದಲೇ ಹೊರಹೊಮ್ಮಿದ್ದು 'ಬೆಳೆಯುವ ಪೈರು ಮೊಳಕೆಯಲ್ಲಿ' ಎನ್ನುವಂತೆ ತನ್ನ ಭಂಡತನವನ್ನು ಪ್ರದರ್ಶಿಸುತ್ತಿರುವುದನ್ನು ಕಾಣುತ್ತೇವೆ..

ಈ ಕಾದಂಬರಿಯು ಹೆಣ್ಣಿನ ಸುತ್ತವೇ ಹೆಣೆದ ಕಾದಂಬರಿಯಾಗಿದ್ದು, ಬದುಕಿನ ಬಂಧನಗಳಿಗೆ ಸಿಲುಕಿ ಒದ್ದಾಡಿದ ಹೆಣ್ಣಗಳನ್ನು ನೋಡುತ್ತೇವೆ. ಇದರ ಜೊತೆಗೆ ಪ್ರತಿರೋಧನೆಗೈದದ್ದನ್ನು ನೋಡುತ್ತೇವೆ. ಜಾತಿಯ ವ್ಯವಸ್ಥೆಯನ್ನು ಮೀರಿ ನಿಂತು ತನ್ನದೆ ಇಷ್ಟಾರ್ಥಗಳನ್ನು ಈಡೇರಿಸಿಕೊಳ್ಳುವ ಹೆಣ್ಣು ಕಾಶಮ್ಮ. ಜಾತ್ರೆಯಲ್ಲಿ ಗೊಂಬೆಯನ್ನು ತೆಗೆದುಕೊಳ್ಳಲು ಅಂಗಡಿಗೆ ಹೋಗಿ ಅಲ್ಲಿ ಚೌಕಾಸಿ ವ್ಯಾಪಾರವನ್ನು ಮಾಡುತ್ತಾಳೆ. ಅಂಗಡಿಯವ ಸ್ವಲ್ಪ ಕೆಣಕುವ ಮಾತಾನ್ನಾಡಿದಾಗ ಅವನ ಜನ್ಮವನ್ನು ಜಾಲಾಡಿ ಅವನ ಮೈಯಲ್ಲಿ ಬೆವರಿಳಿಯುವ ಹಾಗೆ ಮಾತನಾಡಿದ್ದು ಗಮನಾರ್ಹ ಸಂಗತಿಯಾಗಿದೆ. ಇದನ್ನು ತನ್ನ ಬಾಲ್ಯದಿಂದಲೇ ರೂಢಿಸಿಕೊಂಡಿದ್ದಳು ಕಾಶಮ್ಮ. ತನ್ನ ತಂದೆಗೆ ಮಗಳು ಕಾಶಮ್ಮ ಮಗನ ರೀತಿಯಲ್ಲಿ ಕಂಡುಬರುತ್ತಾಳೆ. ತೋಟಕ್ಕೆ ಹೋಗಿ ಕೆಲಸವನ್ನು ಮಾಡಿಸುವುದು, ಸಾಯಂಕಾಲದ ಮಬ್ಬುಕತ್ತಲಿನಲ್ಲಿ ಓಡಾಡುವುದು. ಗಂಡಸರ ಹಾಗೇ ಶ್ರಮದಾಯಕ ಕೆಲಸಗಳನ್ನು ಮಾಡುವುದು ಈಕೆಯ ಅಭ್ಯಾಸವಾಗಿರುತ್ತದೆ. ಇಂತಹ ಹೆಣ್ಣು ಬೆಳೆದು ದೊಡ್ಡವಳಾದ ಮೇಲೆ ಇದೇ ರೀತಿಯ ಧೋರಣೆ ವ್ಯಕ್ತಪಡಿಸುತ್ತಾಳೆ.

ಕೃಷ್ಣಸುಂದರಿಯಾಗಿದ್ದ ಈಕೆಯ ಚೆಲುವಿಗೆ, ಮುಗ್ಧತೆಗೆ, ದಿಟ್ಟತನಗಳಿಗೆ ಮರುಳಾದ ಸಾಪ್ಕಾರ ಗುಲ್ಲಿಂಗಪ್ಪನ ಮಗ ಲಿಂಗರಾಜು ಇವಳ ಪ್ರೀತಿಗೆ ಸೋಲುತ್ತಾನೆ. ಮುಂದೆ ಜಾತಿಯ ಸಮಸ್ಯೆ ತಲೆದೋರಿ ಅಂತರ ಜಾತೀಯ ವಿವಾಹದ ಸಮಸ್ಯೆ ತಲೆದೋರುತ್ತದೆ. ಎರಡೂ ಮನೆಗಳ ವಿರೋಧದ ಪರಿಣಾಮದಲ್ಲಿ ಕಾಶಮ್ಮ ಮಾರ್ತಾಂಡನನ್ನು ವಿವಾಹವಾದರೆ, ಲಿಂಗರಾಜು ನೀಲಮ್ಮನನ್ನು ವಿವಾಹವಾಗಿ ಸಂಸಾರ ಹೂಡುತ್ತಾರೆ. ಮೂರು ವರ್ಷಗಳ ತರುವಾಯ ಬೇಟಿಯಾದ ಪ್ರೇಮಿಗಳಿಬ್ಬರೂ ಪುನಃ ಒಂದಾಗುತ್ತಾರೆ. ಇವಳು ಬೇರೊಬ್ಬನನ್ನು ವಿವಾಹವಾಗಿದ್ದ ವಿವಾಹಿತ ಹೆಣ್ಣು. ಸಮಾಜದ ದೃಷ್ಟಿಯಲ್ಲಿ ಇದೊಂದು ಘನ ಘೋರವಾದಂತಹ ಪ್ರಮಾದವೆನಿಸಿದರೂ ಇದ್ಯಾವುದರ ಬಗ್ಗೆಯೂ ತಲೆ ಕೆಡಿಸಿಕೊಳ್ಳದ ಕಾಶಮ್ಮ ತನ್ನ ಮಾನಸಿಕ ಸ್ಥಿರತೆಗೆ ನಾಂದಿ ಹಾಡುತ್ತಾಳೆ.

ತಾನು ಬದುಕುತ್ತಿರುವುದು ತನ್ನ ಸುಖಕ್ಕಾಗಿ, ಸಂತೋಷಕ್ಕಾಗಿಯೇ ಹೊರತು ಸಮಾಜವನ್ನು ತೃಪ್ತಿಪಡಿಸಲು, ಸಮಾಧಾನ ಪಡಿಸಲು ಅಲ್ಲವೆಂದು ನಂಬಿದ್ದವಳು. ಅದೇ ರೀತಿ ನಡೆದುಕೊಳ್ಳುತ್ತಾಳೆ ಕೂಡ. ಇಂತಹ ಸಂದರ್ಭಗಳಲ್ಲಿ ಹೆಚ್ಚಾಗಿ ಸಂಬಂಧಗಳ ನೀತಿ–ಅನೀತಿಗಳು, ಸುಖ–ದುಃಖಗಳನ್ನು ಹೆಚ್ಚಾಗಿ ಆಲೋಚಿಸುತ್ತಾರೆ. ಆದರೆ ಇದ್ಯಾವುದರ ಬಗ್ಗೆಯು ಹೆಚ್ಚು ತಲೆಕೆಡಿಸಿಕೊಳ್ಳದ ಕಾಶಮ್ಮನು ಜಾತಿಯ ವ್ಯವಸ್ಥೆಯನ್ನು ತಿರಸ್ಕರಿಸಿ ಲಿಂಗರಾಜುನನ್ನು ಕೂಡಿಕೊಳ್ಳುತ್ತಾಳೆ. ತಂದೆ ತಾಯಿಗಳ, ಸಮಾಜದ ಭಯವನ್ನು ತಿರಸ್ಕರಿಸಿ ಲಿಂಗರಾಜುವಿನ ತೋಟದ ಮನೆಯಲ್ಲಿ ಸಂಸಾರವನ್ನು ಹೂಡುತ್ತಾಳೆ.

ತನ್ನ ದುರಾದೃಷ್ಟವೋ ಎಂಬಂತೆ ತೌರು ಮನೆಯಲ್ಲಿ ಕಷ್ಟಗಳ ಸರಮಾಲೆಯೇ ಶುರುವಾಗುತ್ತದೆ. ತಂದೆಯ ಸಾವು, ತಮ್ಮನ ಸೆರೆಮನೆ ವಾಸ ಇವೆಲ್ಲವೂ ನೋವನ್ನು ಇಮ್ಮಡಿಗೊಳಿಸುತ್ತದೆ. ಆದರೆ ಮನಸ್ಸನ್ನು ವಿಚಲಿತಗೊಳಿಸದೆ ತನ್ನ ಮನೆಯ ಜವಬ್ದಾರಿಗಳನ್ನು ಹೊರಲು ಸಿದ್ಧಳಾಗುತ್ತಾಳೆ. ತಮ್ಮನನ್ನು ಬಿಡಿಸಿಕೊಂಡು ಬರಲು ಬಹಳಷ್ಟು ಹಣವನ್ನು ಕೊಡುವುದರ ಮೂಲಕ ಸಹಾಯವನ್ನು ಮಾಡುತ್ತಾಳೆ. ಕೊನೆಗೂ ತನ್ನ ಮನಸ್ಸಿನ ಅಭಿಲಾಶೆಯಂತೆ ನಡೆದುಕೊಳ್ಳುತ್ತಾಳೆ. ಲಿಂಗರಾಜನ ಜೊತೆಯಲ್ಲಿಯೇ ಬಾಳುತ್ತಾಳೆ.

ಇದೇ ಕಾದಂಬರಿಯಲ್ಲಿ ಚಿತ್ರಿತವಾಗಿರುವಂತೆ, ಶತಶತಮಾನಗಳಿಂದಲೂ ಆಚರಿಸಿ ಕೊಂಡು ಬಂದಿದ್ದ ಮೌಢ್ಯಚರಣೆಗಳಲ್ಲಿ ಒಂದಾದ 'ಜೋಗಣಿ' ಪದ್ದತಿಯನ್ನು ವಿರೋಧಿಸಿ ಮೆಟ್ಟಿನಿಂತ ಹೆಣ್ಣು ತುಳಜಾ. ಈಕೆಯು ಅಪ್ಪ–ಅಮ್ಮನ ಆಚರಣೆಗಳಿಗೆ ಕಟ್ಟು ಬಿದ್ದು ಜೋಗಿಣಿಯಾದವಳು. ಚಿಕ್ಕ ವಯಸ್ಸಿನಿಂದಲೂ ಜೋಗಿಣಿಯರ ಜೀವನವನ್ನು ನೋಡುತ್ತಲೇ ಬೆಳೆದಿದ್ದ ಈಕೆಗೆ ಇಚಿತಹ ದಂಧಗೆ ಬೀಳುವುದು ಬೇಕಿರಲಿಲ್ಲ. ತನ್ನ ತಂದೆ ತಾಯಿಗಳನ್ನು ಇಚಿತಹ ಸೂಳೆಗಾರಿಕೆಗೆ ತನ್ನನ್ನು ನೂಕಬೇಡಿ ಎಂದು ಗೋಳಾಡಿ ಬೇಡಿಕೊಂಡಿದ್ದರೂ ಕೂಡ ಈಕೆಯನ್ನು ಜೋಗಿಣಿ ಮಾಡಿದ್ದರು. ತಲೆಯ ಮೇಲೆ ಬುಟ್ಟಿ ಹೊತ್ತು ಕೊರಳಲ್ಲಿ ಕವಡೆ ಸರ, ದೇವಿಯ ಪಾದದ ಬೆಳ್ಳಿ ಪದಕಗಳನ್ನು ಹಾಕಿಕೊಂಡು ಚುಂಚೂರು

ಮಾಪುರತಾಯಿಯ ಹಾಡುಗಳನ್ನು ಹಾಡುತ್ತಾ ಊರೂರು, ಗಲ್ಲಿಗಲ್ಲಿ, ಮನೆಮನೆ, ಬೀದಿಬೀದಿ ರಸ್ತೆ ರಸ್ತೆಗಳನ್ನೆಲ್ಲ ತಿರುಗಿ ಜೋಗಿಣಿ ಹೆಸರಿನಲ್ಲಿ ಭಿಕ್ಷೆ ಬೇಡುತ್ತಾಳೆ. ಇದು ಬೆಳಗಿನ ಸಮಯವಾದರೆ ರಾತ್ರಿಯ ಸಮಯದಲ್ಲಿ ಬರುವ ಗಂಡಸರ ಕಾಮದಾಹವನ್ನು ತೀರಿಸುತ್ತಾಳೆ.

ಜೋಗಿಣಿಯಾಗಿ ಆರೇಳು ತಿಂಗಳುಗಳು ಗತಿಸಿದರೂ ಇಂತಹ ಕೆಲಸ ಈಕೆಗೆ ಒಗ್ಗುವುದೇ ಇಲ್ಲ. ಒಂದು ದಿನ ಸಂತೆಗೆ ಹೋಗಿ ಹಾಡುಗಳನ್ನು ಹೇಳುತ್ತಾ ತಿರುಗುತ್ತಿದ್ದಾಗ ಇವಳ ಹಾಡಿನ ಧ್ವನಿಯನ್ನು, ಮುಖದ ಮೇಲಿರುವ ಚೆಲುವನ್ನು ನೋಡಿ ಮನಸೋತವನು ಹುಸನಪ್ಪ. ಇವಳ ಗೋಳಿನ ಕಥೆಯನ್ನು ಕೇಳಿ ವಿವಾಹವಾಗುವುದಾಗಿಯು ಹೇಳುತ್ತಾನೆ. ನಿಮ್ಮನ್ನು ವಿವಾಹವಾಗುವ ಅರ್ಹತೆ ತನಗಿಲ್ಲವೆಂದು, ನನ್ನ ಮೈ ಮೀಸಲಾಗಿ ಉಳಿದಿಲ್ಲ ಹಾಳಾಗಿದೆ ಎಂದ ತುಳಜಾಳಿಗೆ ಹುಸನಪ್ಪ ಸಮಾಧಾನಿಸುತ್ತಾನೆ. ಮೈಯ ಮೀಸಲು, ದೇಹ ಹಾಳಾಗಿದೆ ಎನ್ನುವುದು ಹೊರಗಡೆ ಕಾಣುವ ದೇಹವಲ್ಲ. ಆತ್ಮ ಮತ್ತು ಮನಸ್ಸು ಶುದ್ಧವಾಗಿದ್ದರೆ ಸಾಕು ಎಂದು ಅವಳನ್ನು ಮುಂಬೈಗೆ ಕರೆದುಕೊಂಡು ಹೋಗುತ್ತಾನೆ. ಅಲ್ಲಿಯೇ ವಿವಾಹವಾಗಿ ಸಂಸಾರ ಹೂಡಿ ನೆಮ್ಮದಿಯ ಬಾಳ್ವೆಯನ್ನು ನಡೆಸುತ್ತಾನೆ. ಇದರ ಪ್ರತೀಕವಾಗಿ ಗಂಡು ಮಗುವೊಂದು ಜನಿಸುತ್ತದೆ. ಮಗುವಿಗೆ ಒಂದು ವರ್ಷವಾದ ನಂತರ ತನ್ನ ಹಳ್ಳಿಯಲ್ಲಿರುವ ಅಪ್ಪ ಅಮ್ಮನ ನೆನಪುಗಳು ಕಾಡಿದಾಗ ಊರನ್ನು ಸೇರುವುದನ್ನು ಕಾಣುತ್ತೇವೆ.

ಒಂದು ಬಾರಿ ಜೋಗಿಣಿಯಾದವರು ಮುಂದೆ ಎಂದು ವಿವಾಹವಾಗುವ ಯೋಚನೆಯೇ ಮಾಡುವ ಹಾಗಿರಲಿಲ್ಲ. ಅವರು ಉಸಿರಿರುವ ತನಕ ದೇಹವನ್ನು ಮಾರಿಯೇ ಜೀವನವನ್ನು ಕಳೆಯಬೇಕಾಗಿತ್ತು. ಅಂತಹದ್ದರಲ್ಲಿ ತುಳಜಾ ವಿವಾಹವಾಗಿದ್ದಳು. ಮನೆಬಿಟ್ಟು ಹೋಗಿದ್ದ ತುಳಜಾಳನ್ನು ತಂದೆ ತಾಯಿಚುರು ಹುಡುಕುವ ಪ್ರಯತ್ನ ಮಾಡಿದ್ದರು ಸಿಕ್ಕಿರಲಿಲ್ಲ. ವಿವಾಹವಾಗಿರುವ ಸಂಗತಿಯು ಊರಿನಲ್ಲಿ ತಿಳಿದಿರಲಿಲ್ಲ. ಏಕಾ ಏಕಿ ಗಂಡ, ಮಗುವಿನ ಜೊತೆ ಊರಿನೊಳಗೆ ಬಂದ ತುಳಜಾಳನ್ನು ನೋಡಿ ಕೆಲವರಿಗೆ ಗಾಬರಿಯಾದರೆ, ಇನ್ನು ಕೆಲವರಿಗೆ ಭಯವಾಗುತ್ತದೆ. ಮಾಪುರತಾಯಿ ಏನು ಶಿಕ್ಷೆ ನೀಡುತ್ತಾಳೋ ಎಂಬುದು ಅವರ ಈ ಭಯದ ಮೂಲವಾಗಿದೆ. ಸೂಳೆಗಾರಿಕೆ ಕೆಲಸವನ್ನು ವಿರೋಧಿಸುತ್ತಿದ್ದ ಕೆಲವರು ತುಳಜಾಳನ್ನು ನೋಡಿ ಸಂತೋಷಪಟ್ಟರು. ಹಲವು ಮಂದಿ ಇವಳ ಮೇಲೆ ಕೋಪವನ್ನು ಕಾರಿದರು. ಕೋಪವನ್ನು ಕಾರಿದವರಲ್ಲಿ ಪ್ರಮುಖರು ಮಾಪುರತಾಯಿ ದೇವಿಯ ಅಧೀಕೃತ ಪ್ರಜಾರಿ, ಕುಲಕರ್ಣಿ, ಊರಿನ ಗೌಡ, ಸಾವ್ಕಾರ ಮೊದಲಾದವರು. ಕಾರಣ ಪರಂಪರಾಗತವಾಗಿ ಹೆಣ್ಣನ್ನು ಜೋಗಿಣಿ ಮಾಡಿ ಅನುಭವಿಸುತ್ತಾ ಬಂದಿದ್ದ ಶ್ರೀಮಂತರಿಗೆ ಇವಳ ವಿರುದ್ಧ ನಡೆಯಿಂದಾಗಿ ಮುಂದೊಮ್ಮೆ ಇಡೀ ಸಮೂಹವೇ ಬದಲಾದರೆ ತಮ್ಮ ದೈಹಿಕ ತೃಷೆಯ ಗತಿಯಾದರೂ ಏನು ಎಂಬುದಾಗಿತ್ತು.

ಜೋಗಿಣಿಯಾದವಳು ಮದುವೆಯಾಗಬಾರದು, ದೇವಿಯನ್ನು ಮೀರಿ ಮದುವೆ ಆಗಿದ್ದೇ ಆದರೆ ಮನೆಯವರೆಲ್ಲರೂ ರಕ್ತ ಕಾರಿ ಸಾಯುತ್ತಾರೆ ಎಂಬ ನಂಬಿಕೆ ಆಳವಾಗಿ ಬೇರೂರಿತ್ತು. ಆದರೆ ತುಳಜಾ ಮತ್ತು ಹುಸನಪ್ಪನಿಗೆ ಯಾವುದೇ ತೊಂದರೆಯಾಗಿರಲಿಲ್ಲ. ಕಾರಣ ಇದೆಲ್ಲವು ಸುಳ್ಳು ವದಂತಿಗಳಾಗಿದ್ದು ಇದನ್ನು ಹಬ್ಬಿಸಿದವನು ಪೂಜಾರಪ್ಪ. ಕುಲಕರ್ಣಿ, ಸಾವ್ಕಾರ, ಗೌಡ ಮೊದಲಾದವರು ಕೊಡುವ ಬಿಡಿಗಾಸುಗಳಿಗೆ ಆಸೆ ಪಟ್ಟು ಅವರುಗಳು ಹೇಳಿ ಕೊಡುವ ಹಾಗೆ ನಡೆದುಕೊಳ್ಳುತ್ತಿದ್ದನು. ಈಕೆ ದೇವಿಗೆ ಭಯ ಪಡದೆ ಮದುವೆಯಾಗಿದ್ದೇ ಅಲ್ಲದೆ ಧೈರ್ಯವಾಗಿ ಊರಿನೊಳಗಡೆಯೇ ಗಂಡನನ್ನು ಕರೆತಂದು ಬಿಡುತ್ತಾಳೆ. ಇವಳ ದಾರಿಯಲ್ಲಿಯೇ ಉಳಿದ ಜೋಗಿಣಿಯರು ಸಾಗುತ್ತಾರೆಂಬ ಅಳುಕು ಪೂಜಾರಪ್ಪ ಮತ್ತು ಇತರ ಮೇಲ್ವರ್ಗದವರಿಗೆ ಕಾಡಿ ಶಿಕ್ಷೆಯನ್ನು ನೀಡಬೇಕೆಂದು ತೀರ್ಮಾನಿಸುತ್ತಾರೆ. ಯಾವುದೇ ಅಪಾಯದ ಮುನ್ಸೂಚನೆ ಅರಿಯದೇ, ಎಲ್ಲವೂ ಸುಗಮವಾಗಿರುತ್ತದೆಂದು ಹಳ್ಳಿಗೆ ಕಾಲಿರಿಸಿದ್ದ ತುಳಜಾಳಿಗೆ ಇದರಿಂದ ದೊಡ್ಡ ಆಘಾತವಾಗುತ್ತದೆ. ಊರುಬಿಟ್ಟು ಹೋಗಲಾರದಂತೆ ಇವರಿಗೆ ಕಾವಲು ಕಾಯಲಾಗುತ್ತದೆ.

ಮಾಪುರತಾಯಿ ಶಿಕ್ಷೆಯನ್ನು ನೀಡಿದ್ದಾಳೆ ಎಂದು ಭಯ ಭೀತಿಯನ್ನು ಉಂಟುಮಾಡಲು ಪೂಜಾರಪ್ಪ ಗೌಡನ ಕುತಂತ್ರದಂತೆ ತುಳಜಾಳ ಜೋಪಡಿಯ ಮೇಲೆ ರಾತ್ರಿ ಬೆಂಕಿಯನ್ನು ಹಾಕಿಸುತ್ತಾನೆ. ಇದಕ್ಕೆ ಗುಡಿಸಲು ಸುಟ್ಟು ಕರಕಲಾಗಿ, ಒಳಗಡೆ ಇದ್ದ ದವಸ ದಾನ್ಯಗಳು ಬೆಂಕಿಗೆ ಆಹುತಿಯಾಗಿ ಎಲ್ಲವನ್ನು ಕಳೆದುಕೊಳ್ಳುತ್ತಾರೆ. ಮರುದಿನವೇ ಊರಿನ ಹಿರಿಯರೆಲ್ಲರ ಸಮ್ಮುಖದಲ್ಲಿ ಪಂಚಾಯ್ತಿಯನ್ನು ಏರ್ಪಡಿಸಿರುತ್ತಾರೆ. ಇದಕ್ಕೆಲ್ಲಾ ಕಾರಣ ತುಳಜಾ ಇನ್ನು ತಮಗೆ ಸಿಗುವುದಿಲ್ಲವೆಂಬುದು ಒಂದಾದರೆ ತುಳಜಾಳ ದಾರಿಯನ್ನು ಮುಂದಿನವರು ಹಿಡಿಯಬಹುದೆಂಬುದು ಮತ್ತೊಂದಾಗಿದೆ.

ಮುಂದೆ ಊರಿನ ಪಂಚರು, ಹಿರಿಯರು ಎಲ್ಲರ ಸಮ್ಮುಖದಲ್ಲಿ ಜರುಗಿದ ಪಂಚಾಯ್ತಿಯು ಜೋಗಿಣಿಯರ ಜೀವನದ ಬಗ್ಗೆ ಬೆಳಕು ಚೆಲ್ಲುತ್ತದೆ. ಪೂಜಾರಪ್ಪನು ಕೆಂಗ್ಗಣ್ಣುಗಳ ಮೂಲಕ ಕಿಡಿಯನ್ನು ಕಾರುತ್ತಾ ಧರ್ಮವನ್ನು ಮೀರಿ ಮಹಾ ಪಾಪದ ಕೆಲಸ ಮಾಡಿದ್ದಾಳೆಂದು ದೂರುತ್ತಾನೆ. ರೀತಿ–ನೀತಿ, ಸಂಪ್ರದಾಯ–ಆಚರಣೆಗಳ ಬಗ್ಗೆ ತಿಳಿಸಿ ತಮ್ಮ ಕುಲದವರ ಮರ್ಯಾದೆಯನ್ನು ಕಳೆದಿರುವೆ ಎಂಬ ಆರೋಪವನ್ನು ಹೊರಿಸುತ್ತಾನೆ. ತಾನು ನುಡಿಯುವ ಮಾತುಗಳೆಲ್ಲವೂ ದೇವಿಯ ಬಾಯಿಯಿಂದ ಬರುವ ಮಾತುಗಳೇ ಎನ್ನುವ ರೀತಿ ಹೇಳುತ್ತಾನೆ. ಇವನ ಮಾತುಗಳಿಂದ ಕೋಪಗೊಂಡ ತುಳಜಾ ಆಕ್ರೋಶದ ಮಾತುಗಳನ್ನಾಡುತ್ತಾಳೆ. "ನೀ ಮಾಡಾ ಜೋಗಣೀರ ಧರ್ಮಾಕರ್ಮ ಯಾವಾದೂ ನನಗ ತಿಳಿಂಗಿಲ್ಲೆಪ್ಪ. ಬ್ಯಾಡಾ ಬ್ಯಾಡಂತ ಕೈ ಜೋಡಿಸಿ ನಿನ್ನ ಕಾಲಿಗೆ ಬಿದ್ದು ಹೊಳ್ಯಾಡದರನೂ ನನಗ ಜನರದಸ್ತಿಲಿಂದ ಎಳ್ಕೊಂಡೊಯ್ದು ಜೋಗಣಿ ಮಾಡಿ ಹಲ್ಕಟ್ ದಂಧೆಗೆ ಹಾಕ್ದಂವಾ ನೀನೆ. ಗುಡ್ಯಾಗಿನ ಆ ದೇವತಿ ಏನು ಹೇಳ್ತಾಳೋ ಬಿಡ್ತಾಳೋ, ಆದರ ನೀ ಮಾತರ ಅಕಿ

ಹೇಳಕಿ ಮಾಡ್ತಿ ನೋಡು. ನಿನ್ನ ಮೈಯಾಗ ಆ ದೇವಿ ಬರ್ತಾಳೋ ಇಲ್ಲೋ, ಅಕಿ ಏನು ಹೇಳ್ತಾಳೋ ನೀ ಏನು ಹೇಳ್ತೋ ಒಂದು ನಮಗ ಗೊತ್ತಾಂಗಗಿಲ್ಲ. ಗುಡಿ ಕಾರಬಾರೆಲ್ಲಾ ನಿನ್ನೊಬ್ಬನ ಕೈಯಾಗೇ ಅದಾ ಅಲ್ಲ. ಕೋಳಿ ಕುರಿಗೆ ತಂದು ದೇವರ ಮುಂದ ಬಲಿ ಕೊಟ್ಟಂಗ ನಮ್ಮಂತಾ ಹಸಿಬಿಸಿ ಹರ್‍ಯಾದ ಪೋರಿಗೋಳ ಶೀಲಕ್ಕನೂ ಬಲಿ ಕುಡ್ತಿ"[೧] ಎಂದು ಪೂಜಾರಪ್ಪನನ್ನೆ ಪ್ರಶ್ನಿಸುವುದು ಅದುವರೆಗಿನ ಸಂಪ್ರದಾಯಕ ಆಚರಣೆಗಳಿಗೆ ತೆರೆ ಎಳೆಯುತ್ತಾಳೆಂದೇ ಭಾವಿಸಬಹುದು.. ಇವಳ ಮಾತುಗಳಿಂದ ಪೂಜಾರಪ್ಪನಿಗೆ ಬಾಯಿ ಬಿದ್ದಂತಾಗಿ ಉಗುಳು ನುಂಗುತ್ತಾನೆ. ಸಿಟ್ಟು ಕೋಪಗಳನ್ನು ಕಾರಿ ತನ್ನ ಅಸಹಾಯಕತೆಯನ್ನು ವ್ಯಕ್ತಪಡಿಸುತ್ತಾನೆ. ಇಂತಹ ಪ್ರತಿಕ್ರಿಯೆಯನ್ನು ನಿರೀಕ್ಷಿಸದ ಪೂಜಾರಪ್ಪನಿಗೆ ಜನರ ಮೇಲಿನ ತನ್ನ ಹಿಡಿತ ಸಡಿಲವಾಗುತ್ತಿರುವಂತೆ ಭಾಸವಾಗುತ್ತದೆ. ಕುಳಿತಲ್ಲಿಯೇ ಚಡಪಡಿಸುತ್ತಾನೆ.

ಪೂಜಾರಪ್ಪನ ಕಿವಿಯಲ್ಲಿ ಮತ್ತೇ ಮತ್ತೇ ತುಳಜಾಳ ಮಾತುಗಳೇ ರಣಗುಡುತ್ತವೆ. ಇಂತಹ ಹಲ್ಕಟ್ ದಂದಗೆ ನಮ್ಮನ್ನು ನೂಕಿ ಚಿತ್ರಹಿಂಸೆ ಕೊಟ್ಟು ಸಾಯಿಸುತ್ತೀಯಾ ಎಂದು ಜೋರು ಮಾಡಿದ್ದಳು. 'ಮಾಪುರತಾಯಿ ನಿನ್ನ ಮೈಯಲ್ಲಿ ಬಂದು ಚೆನ್ನಾಗಿರುವ ಹರೆಯದ ಹೆಣ್ಣು ಮಕ್ಕಳನ್ನು ತನ್ನ ಸೇವೆಗೆ ಬಿಡು, ಆಕೆಯನ್ನು ಸೂಳೆಗಾರಿಕೆಗೆ ಇಳಿಸು ಎಂದು ದೇವಿ ಕೇಳುತ್ತಾಳೆಯೇ ಎಂದು ಪ್ರಶ್ನಿಸಿದ ರೀತಿ ಪೂಜಾರಪ್ಪನ ಕಣ್ಣುಗಳ ಮುಂದೆ ತೇಲುತ್ತಾ ತೇಲುತ್ತಾ ಸಾಗುತ್ತಿತ್ತು. ಊರಿನ ಜನರೆಲ್ಲರು ತುಳಜಾಳ ಮಾತಿಗೆ ಪಿಸು ಪಿಸು ಎಂದು ಮಾತನಾಡಲು ಶುರು ಮಾಡಿದರೆ, ಹಿರಿಯರು ಪಂಚರು ಚಡಪಡಿಸುತ್ತಾರೆ.

ಇದು ಎಲ್ಲರಿಗೂ ಒಂದು ಸವಾಲಿನ ಪ್ರಶ್ನೆಯೇ ಆಗುತ್ತದೆ. ಊರಿನ ಶ್ರೀಮಂತ ವರ್ಗದವರು, ಅಧಿಕಾರವುಳ್ಳ ಹಣವಂತರು ತಮ್ಮ ಕಾಮದಾಹವನ್ನು ತೀರಿಸಿಕೊಳ್ಳುವ ಸಲುವಾಗಿ ಹಾಗೂ ಕೆಳಗೇರಿಯ ಸುಂದರವಾಗಿ ಬೆಳೆದು ಹರೆಯಕ್ಕೆ ಬಂದಿರುವ ಹೆಣ್ಣುಗಳನ್ನು, ತಮ್ಮ ವಶ ಮಾಡಿಕೊಳ್ಳಲು ಬಯಸುತ್ತಿದ್ದರು. ಜನರ ಮೌಢ್ಯತೆಯ ಆಚರಣೆಗಳ ಅರಿವಿದ್ದ ಇವರು ಭೀತಿಯನ್ನು ಉಂಟು ಮಾಡುತ್ತಿದ್ದರು. ತರುವಾಯ ಅವರನ್ನು ಜೋಗಿಣಿಯರನ್ನಾಗಿ ಮಾಡಿ ತಾವೇ ಅನುಭವಿಸುತ್ತಿದ್ದರು. ಇದೊಂದು ಸುಲಭದ ಮಾರ್ಗವು ಕೂಡ ಆಗಿತ್ತು. ಆದರೆ ಇದರ ಅರಿವಿರದ ಮುಗ್ಧ ಹೆಣ್ಣು ಮಕ್ಕಳು ಬಲಿಯಾಗುತ್ತಿದ್ದರು. ಇದರ ಅರಿವಾದ ತುಳಜಾ ಎಲ್ಲಾ ಹೆಣ್ಣು ಮಕ್ಕಳಿಗೂ ಮಾದರಿಯಾಗುವಂತೆ ನಡೆದುಕೊಳ್ಳುತ್ತಾಳೆ. ಇವಳ ನಡೆಯನ್ನು ನೋಡಿ ಪೂಜಾರಪ್ಪ ಮತ್ತಷ್ಟು ಕೋಪವನ್ನು ತಾಳಿ ರಕ್ತದ ಕಾಲುವೆ ಹರಿಸುತ್ತೇನೆ. ಬಾಳೆಹಣ್ಣು ನುಂಗಿದ ಹಾಗೆ ನಿಮ್ಮನ್ನು ಹೊಸಕಿ ಹಾಕುತ್ತೇನೆ ಎಂದು ಕೂಗಾಡುತ್ತಾನೆ. ವಾಸ್ತವವಾಗಿ ಇವನ ಯಾವುದೇ ಮಾತುಗಳು ಶಾಪಗಳು ಫಲಿಸುತ್ತಿರಲಿಲ್ಲವೆಂಬುದು ಸತ್ಯವಾದುದಾಗಿದೆ. ತನ್ನ

---

೧. ಗೀತಾನಾಗಭೂಷಣ್–'ಬದುಕು' ಪುಟ ಸಂಖ್ಯೆ–೨೨೦ ಲೋಹಿಯಾ ಪ್ರಕಾಶನ–೨೦೦೧

ಮಾತುಗಳನ್ನು ಪುಷ್ಟೀಕರಿಸಿಕೊಳ್ಳಲು ಪರಪ್ಪನಿಗೂ ಭಯವನ್ನುಂಟು ಮಾಡುತ್ತಾನೆ. ರಾತ್ರಿ ನಿನ್ನ ಗುಡಿಸಲಿನಲ್ಲಿ ಬೆಂಕಿ ಬೀಳಲು ಆ ದೇವಿಯೆ ಕಾರಣ. ನಿನ್ನ ಮೇಲೆ ಕೋಪಗೊಂಡು ಈ ರೀತಿ ಮಾಡುತ್ತಿದ್ದಾಳೆ ಎಂದು ತಿಳಿಸುತ್ತಾನೆ. ಲೋಕಜ್ಞಾನದ ತಿಳುವಳಿಕೆ ಇಲ್ಲದ ಹಳ್ಳಿಯ ಮುಗ್ಧ ಜನರು ಪೂಜರಪ್ಪನ ಮಾತುಗಳು ಸತ್ಯವೆಂದೇ ಭಾವಿಸುತ್ತಾರೆ. ರಾತ್ರಿ ಜರುಗಿರುವ ಬೆಂಕಿಯ ಅವಘಡಕ್ಕೂ ತುಳಜಾಳ ಕೆಲಸಕ್ಕೂ ತಾಳೆ ಮಾಡಿಕೊಂಡು ಇದುವೇ ನಿಜವೆಂದು ಭಾವಿಸುತ್ತಾರೆ.

ಹಳ್ಳಿಯ ಜನರು ಯಾರ ಮಾತುಗಳು ದಿಟವೆಂದು ನಂಬಲಾಗದೆ ಕಂಗಲಾಗುವ ಸಂದರ್ಭಕ್ಕೆ ಸಿಲುಕುತ್ತಾರೆ. ತುಳಜಾಳು ಆಚರಣೆಗಳ ವಿರುದ್ಧ ನಡೆದಿರುವುದೇ ಆದರೆ ಅದಕ್ಕೆ ತುಳಜಾ ಮತ್ತು ಆಕೆಯ ಗಂಡನಿಗೆ ಶಿಕ್ಷೆ ಆಗಬೇಕಾಗಿತ್ತು. ಅದನ್ನು ಹೊರತುಪಡಿಸಿ ಯಾವುದೇ ತಪ್ಪನ್ನು ಎಸಗದ ತಂದೆ ತಾಯಿಗಳಿಗೆ ಶಿಕ್ಷೆ ಏಕೆ ಆಗಬೇಕು ಎಂದು ವೈಚಾರಿಕತೆಯ ನೆಲೆಯಲ್ಲಿ ಚಿಂತನೆಯನ್ನು ಕೂಡ ಮಾಡುವುದಿಲ್ಲ. ಜೋಗಿಣಿಯಾದವಳು ಕೊನೆಯ ತನಕವೂ ಅದೇ ರೀತಿಯ ಜೀವನದಲ್ಲಿ ಸಾಯಬೇಕೇ? ಎಂದು ಪ್ರಶ್ನಿಸಿಕೊಳ್ಳುವುದಿಲ್ಲ. ಮಾಪುರತಾಯಿ ಎನ್ನುವ ದೇವತೆ ಹೆಣ್ಣು ದೇವತೆ. ಮತ್ತೊಂದು ಹೆಣ್ಣನ್ನು ಇಚಿತಹ ಕೆಲಸಕ್ಕೆ ದೂಡುತ್ತಾಳೆಯೇ ಎಂದು ಆಲೋಚಿಸುವುದು ಕೂಡ ಇಲ್ಲ. ತಮ್ಮ ಹೆಣ್ಣು ಮಕ್ಕಳಿಗೆ ಇಚಿತಹ ಗತಿ ಒದಗಿದರೂ ಕೂಡ ಮೂಢನಂಬಿಕೆಗಳನ್ನು ಹೆಚ್ಚಾಗಿ ನಂಬುವ ಪರಿಯನ್ನು ಕಾಣಬಹುದಾಗಿದೆ.

ಮೊದಮೊದಲು ಜೋಗಿಣಿಯಾದ ಸಚಿದರ್ಭದಲ್ಲಿ ಎಲ್ಲವೂ ಚೆನ್ನಾಗಿಯೇ ಇರುತ್ತದೆ. ಇನ್ನು ತುಂಬು ಹರೆಯದ ಮೈಕಟ್ಟು ಯೌವ್ವನ ಸೌಚಿದರ್ಯ ಎಲ್ಲವೂ ಇದ್ದು ಹೊಟ್ಟೆ ಬಟ್ಟೆಗೆ ಚೆನ್ನಾಗಿಯೇ ಇರುತ್ತದೆ. ಆದರೆ ಹರೆಯವು ಕಳೆದ ಹಾಗೆ ಅವಳ ಮುಂದಿನ ದಾರಿಯ ಬಗ್ಗೆ ಯಾರು ಯೋಚಿಸುವುದು ಕೂಡ ಇಲ್ಲ. ಹಳ್ಳಿಯ ಜನ ಅದ್ಯಾವುದರ ಬಗ್ಗೆಯೂ ತಲೆ ಕೆಡಿಸಿಕೊಳ್ಳದೆ ಜೀವನ ಬಂದ ಹಾಗೆ ಎದುರಿಸುತ್ತಿರುತ್ತಾರೆ. ಹಲವರಲ್ಲಿ ಕೆಲವರಾದರೂ ಕೂಡ ಇದನ್ನು ವಿರೋಧಿಸಿದ್ದೇ ಆದರೆ ಇವರ ಜೀವನ ಸುಗಮಗೊಳ್ಳುತಿತ್ತು. ಪ್ರತಿಭಟನೆಯ ಗೋಜಿಗೆ ಹೋಗದೆ ತಮ್ಮ ಜೀವನವನ್ನು ನರಕಮಯವಾಗಿಸಿಕೊಳ್ಳುತ್ತಿದ್ದರು. ಗಂಡನ ಹೆಸರಿಲ್ಲದ ಮಕ್ಕಳನ್ನು ಹೆತ್ತು ಆ ಮಕ್ಕಳ ಬಾಳನ್ನು ಕೂಡ ದುರಂತಮಯ ಮಾಡುತ್ತಿದ್ದರು. ಇಂತಹ ಜೀವನ ಸಹಿಸದ ಮಕ್ಕಳು ಅರ್ಧದಲ್ಲಿಯೇ ತಮ್ಮ ಬದುಕನ್ನು ಕಳೆದುಕೊಂಡ ಉದಾಹರಣೆಗಳು ಕಣ್ಣ ಮುಂದಿವೆ.

ತುಳಜಾಳು ಮುಂಬೈನಚಿತಹ ಪಟ್ಟಣದಲ್ಲಿ ಇದ್ದು ಅಲ್ಲಿನ ಜನರ ಜೊತೆ ಬೆರೆತು ತಿಳುವಳಿಕೆಯ ಮಟ್ಟವನ್ನು ಸುಧಾರಿಸಿಕೊಂಡಿದ್ದಳು. ರೀತಿ ನೀತಿಗಳು, ಕಾನೂನು ಕಟ್ಟಳೆಗಳ ಬಗ್ಗೆ ಅರಿತು ಲೋಕಜ್ಞಾನವನ್ನು ಪಡೆದ ಹೆಣ್ಣಾಗಿದ್ದಳು. ಪ್ರಜಾರಪ್ಪನ ಆರೋಪಗಳಿಗೆ ಕೋಪಗೊಂಡು ಜ್ವಾಲಾಮುಖಿ ಸ್ಫೋಟಿಸುವಂತೆ ಸಿಡಿದೆದ್ದಳು. ಪ್ರಜ್ಞಾವಂತ ನಾಗರೀಕ

ಸಮಾಜವೇ ತಲೆ ತಗ್ಗಿಸುವಂತಹ ಆಚರಣೆಗಳ ಬಗ್ಗೆ ಎಳೆ ಎಳೆಯಾಗಿ ಬಿಚ್ಚಿಟ್ಟಳು. ತೀರಾ ಕೆಳವರ್ಗದ ಹೆಣ್ಣು ಮಕ್ಕಳೇ ಏಕೆ ದೇವಿಗೆ ಇಷ್ಟವಾಗುತ್ತಾಳೆ ಎಂಬುದನ್ನು ತಿಳಿಸುತ್ತಾ ಜೋಗಿಣಿಯರ ಕಹಿ ಜೀವನವನ್ನು ಬೆತ್ತಲೆಯಾಗಿಸಿದಳು. ನೋಡುಗರ ಕಣ್ಣಿಗೆ ಉತ್ತಮ ಜೀವನದಂತೆ ಕಾಣುವ ಈ ದಂಧೆ ಹೆಣ್ಣು ಮಕ್ಕಳಿಗೆ ಹೇಗೆ ಜಿಗುಪ್ಸೆಯನ್ನು ಮೂಡಿಸುತ್ತದೆ ಎಂಬುದು ತುಳಜಾಳ ಮಾತುಗಳಿಂದ ವ್ಯಕ್ತವಾಗುತ್ತದೆ.

ಕೆಟ್ಟ ರೂಢಿ ಸಂಪ್ರದಾಯಗಳಿಂದ ಹೆಣ್ಣಿನ ಬಾಳು ದುಸ್ಥಿತಿಗೆ ಇಳಿಯುವುದನ್ನು ತಿಳಿಸುತ್ತಾಳೆ. ಪೂಜರಪ್ಪನ ಕಡೆ ತಿರುಗಿ ಆಕ್ರೋಶಗೊಂಡು ನೀ ಮಾಡಿದ್ದ ಜೋಗಣೇರ ಹಣೇಬರ ಏನಾಗ್ಯಾದಂಬಾದು ನಿನಗೇ ಗೊತ್ತದಾನೋ ಪೂಜಾರೀ... ಆ ಜೋಗಣಿ ಮಲಕವ್ವಗ ಮೈಯೆಲ್ಲಾ ಹುಣ್ಣು ಬಿದ್ದು ದಿನಾ ಬೆಳಗಾದರ ನಿನ್ನ ಮ್ಯಾಲ ಹಿಡಿ ಸರಾಪ ಹಾಕಿ ಬೈಯ್ಕೋತ ಆಳತಾಳ... ಆ ಜೋಗಣಿ ಗೋರವ್ವ ಮುದಕ್ಯಾಗಿ ಲಕ್ವಾ ಹೊಡ್ದು ಬಿದ್ದಾಳ... ಆಕೀಗಿ ಯಾರು ನೋಡ್ಕೊಳ್ಳವರಿಲ್ಲ... ಅಕಿಗಿನೂ ಗಂಡ, ಮಕ್ಕಳು ಅಂತದ್ದರ ಅಕಿನ ಗತಿ ಹಿಂಗಾಗಿತ್ತಾ? ನಮ್ಮೂರ ಬೂದೆವ್ವಂತೂ ಊರ ಗಂಡಸರೆಲ್ಲಾ ಅಕಿನ ಹಾಸಗ್ಯಾಗ ಬಿಟ್ಟು ಹ್ವಾದ ಬ್ಯಾನಿಯೆಲ್ಲಾ ಮೈಗಿ ಹತ್ತಿ ಯಾ ಡಾಕಟರನೂ ಅಕಿನ ಇಲಾಜ ಮಾಡ್ಲಕ್ಕ ಮುಂದ ಬಂದಿಲ್ಲಂತಂಬಾದು ನಿನಗ ಗೊತ್ತಿಲ್ಲಾ? ಈ ಎಲ್ಲಾ ಜೋಗಣೇರ ಹಣೇಬರೇನಾಗ್ಯದ ನೋಡು...ಮುದಿ ಜೋಗರೆಲ್ಲಾ ಇಕಾಡಿ ಗಿರಾಕಿಗೋಳಿಲ್ದೆ ಅಕಾಡಿ ಬಿಕ್ಕಿ ಬೇಡದರ ಹಿಟ್ಟು, ಅಕ್ಕಿನೂ ಸಿಗಲಾರ್ದೆ ಉಪಾಸ ವನವಾಸ ಸಾಯ್ಲಿಕತ್ತಾರ ಕೇಳು ಆ ಜೋಗಣೇರಿಗೀ...ಅವರ ಹಾಲತ್ತು ಏನಾಗ್ಯಾದಂಬಾದು ತೀಳಿತಾವ ನಿನಗ...ಹರ್ಯಾದ ಕಾಲಕ್ಕ ಈ ಗಂಡಸರೆಲ್ಲಾ ತಮ್ಮ ಮೈ ತಿಂಡಿ ತಿರಿಸ್ಗೊಂಡು ಹೋಗ್ರಾರ ಖರೇ. ಆ ಮ್ಯಾಲ ಮುಪ್ಪಿನ ಕಾಲಕ್ಕೆ ಬ್ಯಾನಿಗೂಡಾಗಿ ಈ ಜೋಗಣೇರು ತುತ್ತುಕೂಳಿಗಾಗಿ ಗೋಳ್ಯಾಡ ಮುಂದ ಯಾ ನನ್ ಹಾಟ್ಯಾನೂ ಬರಂಗಿಲ್ಲ. ಅವಾಗೇನು ·ಮಾಡ್ತಾಳ ನಿನ್ನ ದೇವಿ? ಏನು ಮಾಡ್ತಿ ನೀನು? ಡಾಕಟರಗಾ ಹಕೀಮಗಾ ಕರ್ಸಿ ಇವ್ರೀಗೆ ಇಲಾಜ ಮಾಡಸ್ತ್ಯಾ ನೀನು? ಅವರ ಹೊಟ್ಟೀಗಿ ಬಟ್ಟೀಗಿ ಕೊಟ್ಟು ಅವರಿಗಿ ಬದಕಲ್ಲಕ ಆಸರ ಆಗ್ತ್ಯಾ ನೀನು?[೨] ಎಂದು ದಿಟ್ಟವಾಗಿ ಪ್ರಸ್ನಿಸುತ್ತಾಳೆ. ಮಾತು ಬಾರದ ದೇವರ ಗೊಂಬೆಯನ್ನು ಮಾಡಿ ತಮ್ಮ ಸ್ವಾರ್ಥಗಳಿಗೆ ಬಳಸಿಕೊಳ್ಳುವ ಪರಿಯನ್ನು ತಿಳಿಸುತ್ತಾಳೆ.

ಹಳ್ಳಿಯಲ್ಲೇ ಇದ್ದು ಕೆಲವಾರು ವರ್ಷ ನಗರದಲ್ಲಿ ಬೆಳೆದದ್ದರ ಫಲವಾಗಿ ತನ್ನಲ್ಲೇ ಅಭಿಮಾನವನ್ನು ಮೂಡಿಸಿಕೊಂಡಿದ್ದಳು. ಮೊದಲಿನ ತರಹ ಅಳು ಅಂಜಿಕೆಗಳನ್ನು ಬಿಟ್ಟು ಧೈರ್ಯವನ್ನು ಮೈಗೂಡಿಸಿಕೊಂಡಿದ್ದಳು. ಮಾನಸಿಕವಾಗಿ ತನ್ನನ್ನು ತಾನು ಗಟ್ಟಿಗೊಳಿಸಿ ಕೊಂಡಿದ್ದಳು. ಜೋಗಣಿಯರ ಧರ್ಮಾಧರ್ಮದ ಬಗ್ಗೆ ಪ್ರಶ್ನಿಸಿ,

---

೨. ಗೀತಾನಾಗಭೂಷಣ್–'ಬದುಕು' ಪುಟ ಸಂಖ್ಯೆ–೨೨೪ ಲೋಹಿಯಾ ಪ್ರಕಾಶನ–೨೦೦೧

ಪೂಜರಪ್ಪನ ಬಂಡವಾಳವನ್ನು ಯಾವುದೇ ಮುಲಾಜಿಲ್ಲದೆ ಸಮಾಜದ ಎದುರು ತೋರಿಸಿದ್ದಳು. ಇದೆಲ್ಲವು ದೇವಿ ಹೆಸರಿನ ಮೇಲೆ ನಡೆಯುವ ತಲೆ ಹಿಡುಕ ದಂಧೆ ಎಂದು ತಿಳಿಸಿ ಪೂಜಾರಪ್ಪನ ಕೋಪಕ್ಕೆ ಮತ್ತಷ್ಟು ತುತ್ತಾಗುತ್ತಾಳೆ. ಊರಿನ ಹಿರಿಯರು ಕೂಡ ಇವಳ ಮಾತುಗಳಿಗೆ ಒಳಗೊಳಗೆ ಕುದಿಯತೊಡಗಿದರು. ಹಿಂದಿನಿಂದಲೂ ಬೆಳೆದುಕೊಂಡು ಬಂದಿದ್ದ ರೀತಿ ನೀತಿಗಳನ್ನು ಪ್ರಶ್ನಿಸಿ ಶಾಸ್ತ್ರ ಸಂಪ್ರದಾಯಗಳ ವಿರುದ್ಧ ನಡೆಯುತ್ತಿದ್ದಾಳೆ. ಇವಳ ಮಾತುಗಳನ್ನು ಕೇಳಿ ಉಳಿದ ಜೋಗಣಿಯರು ಅದೇ ದಾರಿಯಲ್ಲಿ ನಡೆದರೆ ಮುಂದೇನು? ನಮ್ಮ ಕಾಲದಲ್ಲಿಯೇ ಸನಾತನ ಆಚರಣೆಗಳಿಗೆ ಅಡ್ಡಿ ಬರುತ್ತದೆ ಎಂದು ಚಡಪಡಿಸುತ್ತಾರೆ. ಮುಂದೆ ಈ ರೀತಿ ಸಾಗಬಾರದೆಂದು ತುಳಜಾಳಿಗೂ ಮತ್ತು ಪರಪ್ಪನಿಗೂ ಶಿಕ್ಷೆಯನ್ನು ವಿಧಿಸುತ್ತಾರೆ. ಈ ನೆಲೆಯಲ್ಲಿ ಊರಿನ ಪಂಚರ ತೀರ್ಮಾನವನ್ನು ದಿಕ್ಕರಿಸಿ ತಂದೆ ತಾಯಿಯರನ್ನು ಕರೆದುಕೊಂಡು ಊರನ್ನು ಬಿಟ್ಟು ಹೊರಹೋಗುವುದು ಅವಳಲ್ಲಿ ಬದಲಾಗಿರಬಹುದಾದ ವ್ಯಕ್ತಿತ್ವಕ್ಕೆ ಸಾಕ್ಷಿಯಾಗುತ್ತದೆ.

ಹೆಣ್ಣೆಂದರೆ ಕೇವಲ ಅಡುಗೆ ಮಾಡಿ, ತೊಟ್ಟಿಲು ತೂಗಲಷ್ಟೇ ಸಮರ್ಥಳು. ಆಕೆ ಸದಾಕಾಲ ನಾಚಿಕೆ ಜೊತೆಗೆ ಅಂಜಿಕೆಯನ್ನೇ ಮೈಗೂಡಿಸಿಕೊಂಡಿರುತ್ತಾಳೆ ಎಂದು ಭಾವಿಸಿದ್ದ ಜನರಿಗೆ ಈಕೆಯೊಂದು ಅಭಿಮಾನದ ಪ್ರತೀಕವಾಗುತ್ತಾಳೆ. ಕಷ್ಟಗಳಲ್ಲೇ ಬೇಯುತಿದ್ದ ಜೋಗಣಿಯರಿಗೆ ಆಶಾದೀಪವಾಗುತ್ತಾಳೆ. ಜೋಗಣಿಯಾದಾಗಿನಿಂದಲೂ ಸಾಯುವ ತನಕವೂ ತಾವು ಪ್ರತಿನಿತ್ಯ ಅನುಭವಿಸುವ ನರಕಯಾತನೆಯ ಬದುಕಿನ ಬಗ್ಗೆ ತಿಳಿಸಿ ಅವರೆಲ್ಲರೂ ಬದಲಾವಣೆಯ ಗಾಳಿಯ ಕಡೆ ತಿರುಗಲು ಅನುವು ಮಾಡಿಕೊಡುತ್ತಾಳೆ. ಭಯದ ವಾತವರಣದಲ್ಲೇ ಬದುಕನ್ನು ದೂಡುತಿದ್ದವರಿಗೆ ತಿಳುವಳಿಕೆಯನ್ನುಂಟು ಮಾಡುತ್ತಾಳೆ. ಇವಳ ಈ ಧೈರ್ಯತನವು ಹೆಣ್ಣನ್ನು ಸಮಾಜದ ಮುಖ್ಯವಾಹಿನಿಗೆ ಬರಲು ಪ್ರೇರೆಪಿಸುತ್ತದೆ.

ಜೋಗಣಿಯಾಗಿ ದಿಟ್ಟತನದಿಂದ ತಿರಸ್ಕರಿಸಿ ಬಂದ ಹೆಣ್ಣು ಒಂದು ಕಡೆಯಾದರೆ ಯಾರ ಆಸರೆಯೂ ಇಲ್ಲದೆ ಬಾಳ್ವೆ ನಡೆಸುವ ಹೆಣ್ಣು ಮತ್ತೊಂದು ಕಡೆ. ಕಾಶಮ್ಮನ ನಡೆಯೇ ಕಾರಣವಾಗಿ ಬದುಕು ಛಿದ್ರ ವಿಚಿದ್ರವಾಗುವ ಮಲ್ಲಪ್ಪನ ಮನೆಯಲ್ಲಿ ಬೆಳ್ಳಿಯೊಬ್ಬಳೇ ಜೀವನ ನಡೆಸಬೇಕಾದ ಅನಿವಾರ್ಯತೆ ಎದುರಾಗುತ್ತದೆ. ಕೊಲೆ ಕೇಸಿನಲ್ಲಿ ಗಂಡ ಜೈಲು ಸೇರಿದರೆ ಅದೇ ಚಿಂತೆಯಲ್ಲಿ ಅತ್ತೆ ಹಾಸಿಗೆ ಹಿಡಿಯುತ್ತಾಳೆ. ತುಂಬು ಸಂಸಾರದಲ್ಲಿ ಬೆಳೆದು ಅಂತಹದ್ದೇ ಮನೆಗೆ ಕಾಲಿರಿಸಿದ್ದ ಬೆಳ್ಳಿಗೆ ಬಾಲ್ಯದಲ್ಲಿಯೇ ಮನೆಯ ಜವಬ್ದಾರಿ ಹೊರುವ ಶಿಕ್ಷೆ ಅವಳ ಪಾಲಿನದಾಗುತ್ತದೆ. ಇದರ ಜೊತೆಗೆ ವಿರಹ ವೇದನೆಯೂ ಕೂಡ. ಜೈಲಿನಲ್ಲಿರುವ ಗಂಡನನ್ನು ಬಿಡಿಸಿಕೊಂಡು ಬರಲು ಮನೆಯಲ್ಲಿದ್ದ ಎಲ್ಲವನ್ನು ಕಳೆದುಕೊಂಡು ತೋಟವನ್ನು ಕೂಡ ಮಾರುವ ಸ್ಥಿತಿ ಒದಗಿ ಬರುತ್ತದೆ. ಇಷ್ಟಾದರೂ ಕೂಡ ಗಂಡನಿಗೆ ಶಿಕ್ಷೆ ಕಡಿಮೆಯಾಗಿರಲಿಲ್ಲ. ಇದರ ಜೊತೆಗೆ ಹಾಸಿಗೆ ಹಿಡಿದ ಅತ್ತೆಯನ್ನು, ಎರಡು ಚಿಕ್ಕ ಮಕ್ಕಳನ್ನು

ನೋಡಿಕೊಂಡು ಬೆಳೆಸಬೇಕಾದ ಕಷ್ಟದ ಪರಿಸ್ಥಿತಿ ಎದುರಾಗುತ್ತದೆ. ತನ್ನ ಗಂಡನನ್ನು ಬಿಡಿಸಿಕೊಳ್ಳುವ ಭರದಲ್ಲಿ ಎಲ್ಲವನ್ನೂ ಕಳೆದುಕೊಂಡು ಕೂಲಿ ಮಾಡುವ ಸ್ಥಿತಿ ಬೆಳ್ಳಿಯದಾಗುತ್ತದೆ. ಅಂತಹ ಸಮಯದಲ್ಲೂ ಧೈರ್ಯ ಕಳೆದುಕೊಳ್ಳದೆ ಸಹನೆಯಿಂದಲೇ ಮುನ್ನುಗ್ಗಿ ಬದುಕಿನ ಯುದ್ಧದಲ್ಲಿ ಹೋರಾಟವನ್ನು ಮಾಡುವುದನ್ನು ಕಾಣುತ್ತೇವೆ. ಇದರ ಪರಿಣಾಮವಾಗಿ ಮೈ ಕೈ ತುಂಬಿಕೊಂಡಿದ್ದ ಈಕೆ ದಿನಗಳು ಕಳೆದಂತೆ ಒಣಗಿದ ಕಟ್ಟಿಗೆಯಂತಾಗಿ, ಕಣ್ಣುಗಳು ಗುಳಿ ಬಿದ್ದ ಹಾಗೇ ಆಗಿ ಗಲ್ಲಗಳು ಬಾಡಿ, ದೇಹದಲ್ಲಿ ರಕ್ತವಿಲ್ಲದೆ ಮುಖವೆಲ್ಲವೂ ಬಿಳುಚಿಕೊಳ್ಳುತ್ತದೆ.

ಕೋರ್ಟಿಗೆಂದು ಮಾಡಿದ್ದ ಸಾಲವನ್ನು ತೀರಿಸಲು ಒತ್ತಡಗಳು ಹೆಚ್ಚಾದಾಗ ತೋಟವನ್ನು ಮಾರುವ ನಿರ್ಧಾರಕ್ಕೆ ಬರುತ್ತಾಳೆ. ಗೌಡನ ಹೊಲ ಸೇರಿ ಅವನ ಹೆಂಡತಿಯಂತಾಗಿದ್ದ ಕಾಶಮ್ಮಳು ತಾನೇ ಹಣದ ಸಹಾಯವನ್ನು ಮಾಡಿದರೂ, ಹಂಗಿನಲ್ಲಿ ಇರಲು ಬಯಸದ ಬೆಳ್ಳಿ ಹಗಲು ರಾತ್ರಿ ದುಡಿದು ಸಾಲವನ್ನು ತೀರಿಸುತ್ತಿದ್ದವಳಿಗೆ ಮತ್ತೊಂದು ಹೊಡೆತ. ಅದೆಂದರೆ ನನಗೆ ನೀನು, ನಿನಗೆ ನಾನು ಎಂಬಂತೆ ಒಬ್ಬರ ಆಸರೆಯಲ್ಲಿ ಮತ್ತೊಬ್ಬರಾಗಿ ಅತ್ತೆ ಸೊಸೆಯರು ಇರುವಾಗ ಅತ್ತೆಯ ಸಾವು ಅವಳ ಬದುಕನ್ನು ಹೈರಾಣಾಗಿಸುತ್ತದೆ. ಒಬ್ಬಂಟಿಯಾಗುತ್ತಾಳೆ. ತನ್ನ ಅಸಹಾಯಕತೆ, ಕಣ್ಣೀರುಗಳಿಗೆ, ಚಡಪಡಿಕೆಗಳಿಗೆ ಯಾವುದೇ ಕಲ್ಲುಗಳು ಕರಗಿ ಹೂವಾಗಿರಲಿಲ್ಲ.

ಮುಂದೆ ತನ್ನ ಬದುಕಿನ ಗತಿಯನ್ನು ಬದಲಿಸಿಕೊಂಡ ಈಕೆ ಎದೆಯನ್ನು ಬಂಡೆಗಲ್ಲಿನಂತೆ ಕಠಿಣಗೊಳಿಸಿಕೊಂಡು ಮುಂದಿನ ದಾರಿಯನ್ನು ಸವೆಸುತ್ತಾಳೆ. ಕೊಟ್ಟ ಹೆಣ್ಣು ಕುಲಕ್ಕೆ ಹೊರಗೆ ಎಂಬ ಗಾದೆ ಮಾತಿನಂತೆ ತವರು ಮನೆಗೆ ಹೋಗದೆ ತನ್ನ ಮನೆಯಲ್ಲಿಯೇ ಬದುಕಿಗೆ ಎದೆಯೊಡ್ಡುತ್ತಾಳೆ. ಸಮಾಜದ ಮೇಲ್ವರ್ಗದ ಕೆಲಸ ಕೆಳವರ್ಗದ ಕೆಲಸ ಎಂಬುದನ್ನು ನೋಡ್ಡದೆ ಎಲ್ಲಾ ಕೆಲಸಗಳನ್ನು ಮಾಡಿ ಮರ್ಯಾದೆಯಿಂದ ಬದುಕುತ್ತಾಳೆ. ತೋಟದಲ್ಲಿ ಕೆಲಸ ಮಾಡಿ, ಅಲ್ಲಿ ಕೆಲಸವಿಲ್ಲದ ಸಮಯದಲ್ಲಿ ಮುಂಜಾನೆಯೇ ಕೊರವರ ಈರವ್ವನ ಜೊತೆ ಕಾಡಿಗೆ ಹೋಗುತ್ತಾಳೆ. ಅಲ್ಲಿ ಸಿಗುವ ಸಿಂದಿ ಪೊರಕೆ, ಕಡ್ಡಿಗಳನ್ನು ಕಡಿದು ತಲೆಯ ಮೇಲೆ ಹೊತ್ತುಕೊಂಡು ಮನೆಗೆ ಸಾಗುತ್ತಾಳೆ. ನಗರ ಪ್ರದೇಶದಲ್ಲಿ ಬೆಳೆದು ಅಕ್ಷರಾಭ್ಯಾಸವನ್ನು ಮಾಡಿ ವಿದ್ಯಾವಂತೆಯಾಗಿದ್ದ ಬೆಳ್ಳಿಗೆ ಹಳ್ಳಿಯಲ್ಲಿ ಇಂತಹ ಕೆಲಸ ಮಾಡುವುದು ಕಷ್ಟವೇ ಆದರೂ ಅದನ್ನು ಇಷ್ಟಪಟ್ಟು ಮಾಡುತ್ತಾಳೆ. ಪ್ರತಿದಿನ ಬಿಡುವಿನ ಸಮಯದಲ್ಲಿ ತಾನು ತಂದಿದ್ದ ಕಟ್ಟಿಗೆಯ ಹೊರೆಯಲ್ಲಿ ಪೊರಕೆಯನ್ನು ಸೀಳಿ, ಕಟ್ಟಿಗೆಗಳನ್ನು ಬೇರೆ ಬೇರೆಯಾಗಿ ಬೇರ್ಪಡಿಸಿ, ಬಿಸಿಲಿನಲ್ಲಿ ಒಣಗಿಸಿ ಮತ್ತೆ ಅದನ್ನು ನೀರಿನಲ್ಲಿ ನೆನೆಸಿಟ್ಟು, ನೆನೆದ ಬಾರು ಕೋಲುಗಳಲ್ಲಿ ಸುಂದರವಾದ ಬುಟ್ಟಿ, ಚಾಪೆಗಳನ್ನು ಹೆಣೆಯುವ ಕೆಲಸ ಮಾಡುತ್ತಾಳೆ. ಇಂತಹ ಕುಸುರಿ ಕೆಲಸವನ್ನು ಟೀಕಿಸಿದ ಮಂದಿ ಬಹಳಷ್ಟು, "ಕೆಳಗೇರಿನೂ ಈಗ ಕೊರುರ ಕೇರಿ ಆಗ್ಯಾದ ಬಿಡ್ರಿ... ನಮ್ಮಂದಿ ಹೆಂಗಸ್ಸು ಕೊರರಂಗ ಸಿಂದಿ

ಪರಕಿ ಹೊತಗೊಂಡು ಬಂದು ಅಂಗಳಾಗ ಹಾಕಿ ಭಾರಗಿ, ಚಾಪಿ ಹೆಣ್ಣಾದಂದ್ರೆನು ಆಪೇಸಿ? ಯಾರ ಧಂದಾ ಅವರು ಮಾಡದ್ರೆ ಛಲೋ... ಇವತ್ತ ಭಾರಗಿ ಕಟ್ಟತಾಳ... ನಾಳಿಗಿ ಸಮಗಾರ ಕೆಲಸಾ ಕಲ್ತು ಚಪ್ಪಲಿನೂ ಹೋಲಿತಾಳ ಬಿಡು... ನಮ್ಮ ಕುಲದ ಮಾನಾ ಮರ್ವಾದಿ ಹರಜಾಕ್ತಾಳ ಇಕೀ...[೩] ಎಂದು ತಮ್ಮ ಹೊಟ್ಟೆ ಕಿಚ್ಚನ್ನು ವ್ಯಕ್ತ ಪಡಿಸಿದ್ದು ಗಮನಾರ್ಹ.

ತನ್ನನ್ನು ಟೀಕಿಸುವ ಸಮಾಜ ತನ್ನ ಕಷ್ಟಗಳಿಗೆ ಆಗುವುದಿಲ್ಲವೆಂಬುದನ್ನು ಅರಿತಿದ್ದ ಬೆಳ್ಳಿ ದಿಟ್ಟತನದಿಂದಲೆ ತನ್ನ ಕೆಲಸ ಕಾರ್ಯಗಳನ್ನು ಮಾಡುತ್ತಿದ್ದಳು. ಕಾಯಕವೇ ಕೈಲಾಸವೆಂದು ಅರಿತು ಸಣ್ಣ ಕೆಲಸವೆನ್ನದೆ ದುಡಿದು ಜೀವನ ಸಾಗಿಸುತ್ತಿದ್ದಳು. ಸಮಾಜದಲ್ಲಿ ಗಂಡು ದಿಕ್ಕಿಲ್ಲದ ಹೆಣ್ಣು ತೊಂದರೆಗಳಿಲ್ಲದೆ ಬಾಳುವುದು ಬಹಳ ಕಷ್ಟದ ಕೆಲಸ. ಹೊಟ್ಟೆಯನ್ನು ತುಂಬಿಸಿಕೊಂಡು ಮರ್ಯಾದೆಯಿಂದ ಬಾಳೋಣವೆಂದರೆ ಕೆಟ್ಟ ಕಣ್ಣುಗಳಿಗೆ ಬೇಗನೆ ಗುರಿಯಾಗುತ್ತಾರೆ. ಬೇಲಿ ಇಲ್ಲದ ಹೊಲ ಅಂದರೆ ಅದಕ್ಕೆ ಹಾದಿಬೀದಿ ದನಗಳೆಲ್ಲಾ ಮೇಯಲಿಕ್ಕೆ ಬರುತ್ತವೆ. ಅದೇ ರೀತಿ ಒಂಟಿ ಹೆಣ್ಣು ಬದುಕ ಬೇಕೆಂದರೆ ಕಾಮುಕರು ಕಿತ್ತು ತಿನ್ನಲು ಹವಣಿಸುತ್ತಿರುತ್ತಾರೆ. ಒಟ್ಟಿನಲ್ಲಿ ಒಂಟಿ ಹೆಣ್ಣು ದುಡಿದು ತಿನ್ನಲು ಬಿಡುವುದಿಲ್ಲ.

ಅಡವಿಗೆ ಸೌದೆ ತರಲು ಒಬ್ಬಂಟಿಯಾಗಿ ಹೋಗಿದ್ದಾಗ ಗೌಡ ವಿರುಪಾಕ್ಷಪ್ಪ ಇವಳ ಮೇಲೆ ಆಸೆಯನ್ನು ವ್ಯಕ್ತಪಡಿಸುತ್ತಾನೆ. ಹಿಂದೆ ಮುಂದೆ ಅಕ್ಕ ಪಕ್ಕ ಯಾರು ಇರಲಿಲ್ಲ ಗೌಡ ಏನು ಮಾಡಿದರೂ ರಕ್ಷಿಸಲು ಯಾರೂ ಹತ್ತಿರದಲ್ಲಿ ಕಾಣಲಿಲ್ಲ. ಆ ದಿನ ತನ್ನ ಆಸೆಗಳನ್ನು ವ್ಯಕ್ತಪಡಿಸಿದ್ದನಷ್ಟೆ ಗೌಡ. ಅದೇ ಚಿಂತೆಯಲ್ಲಿ ಇದ್ದವಳಿಗೆ ವಿರಹದ ವೇದನೆಯು ಕಾಡುತಿತ್ತು. ಹಗಲು ರಾತ್ರಿ ನೆಮ್ಮದಿಯಾಗಿ ನಿದ್ದೆ ಬರುತ್ತಿರಲಿಲ್ಲ. ಕಣ್ಣೀರು, ನಿಟ್ಟುಸಿರು, ಚಿಂತೆಗಳಲ್ಲೆ ನೆನಪು ಸಂಕಟಗಳು ತೇಲಿ ತೇಲಿ ಬರುತ್ತಿದ್ದವು. ತಲೆಯ ಕೂದಲುಗಳೆಲ್ಲ ಬೆಳ್ಳಗಾಗಿ ಮೈಯಲ್ಲಿ ಮೊದಲಿನ ತರಹ ತಾಕತ್ತು ಉಳಿದಿರಲಿಲ್ಲ. ಚಡಪಡಿಕೆಗಳು ಹೆಚ್ಚಾಗಿತ್ತು.

ಕಂಡಂತ ಗೆಳತೇರು ಉಂಡೆಂತ ಕೇಳಿದರ
ಉಂಡೆ ಬಾ ಗೆಳತಿ ಸುಕವಿಲ್ಲ। ಬಾಳೀಯ
ದಿಂಡು ನೀರಾಗ ಕೊಳೆತಾಂಗ॥[೪]

ಎನ್ನುವ ಜನಪದ ಗೀತೆಯ ತರಹವೇ ತನ್ನ ಬಾಳು ನಡೆಯುತಲಿದ್ದು ನೀರಿನಲ್ಲಿರುವ ಬಾಳೆಯ ದಿಂಡಿನ ತರಹವೇ ಕೊಳೆಯುತ್ತಲಿದೆ ಎಂದು ಸಂಕಟಪಟ್ಟುಕೊಂಡು ಬದುಕನ್ನು ಸಾಗಿಸುತ್ತಾಳೆ. ದಿನೇ ದಿನೇ ಕಾಮುಕರ ಕಾಟ ಹೆಚ್ಚಾಗತೊಡಗುತ್ತದೆ. ಒಂಟಿ ಹೆಣ್ಣಿನ ಮೇಲೆ ರಾತ್ರಿ ದಾಳಿ ಮಾಡಿದರೂ ಹತ್ತಿರದಲ್ಲಿ ಯಾರು ಇರಲಿಲ್ಲ. ಇದೇ ಚಿಂತೆಯಲ್ಲಿದ್ದವಳಿಗೆ ಒಂದು ರಾತ್ರಿ ಅದು ಕೂಡ ನಡೆದು ಹೋಗಿತ್ತು. ತನ್ನನ್ನೇನೋ ರಕ್ಷಿಸಿಕೊಂಡಳು, ಆದರೆ ಈ ಘಟನೆ ನಡೆದಾಗಿನಿಂದಲೂ ಬೆಳ್ಳಿ ಥರ ಥರನೆ ನಡುಗಿ ಹೋಗಿದ್ದಳು. ಈ ಸಮಾಜವೇ ಹಾಗೆ ಒಂಟಿ

---

೩. ಗೀತಾನಾಗಭೂಷಣ್-'ಬದುಕು' ಪುಟ ಸಂಖ್ಯೆ-೧೨೪ ಲೋಹಿಯಾ ಪ್ರಕಾಶನ-೨೦೦೧

೪. ಹಾಲತಿ ಸೋಮಶೇಖರ್-ಮಹಿಳಾ ಚಳುವಳಿ: ಸಾಮಾಜಿಕ ಮತ್ತು ಸಾಂಸ್ಕೃತಿಕ ಹಿನ್ನಲೆ: ಪುಟ ಸಂಖ್ಯೆ-೨.೫ ವಿಸ್ಮಯ ಪ್ರಕಾಶನ: ೨೦೦೭

ಹೆಣ್ಣು ಇದ್ದರೆ ಹಸಿ ಮಾಂಸವನ್ನು ಕುಕ್ಕಿ ತಿನ್ನುವ ಹದ್ದುಗಳ ಹಾಗೆ ಎರಗುತ್ತಾರೆ. ಗೌಡನು ತನ್ನ ಪರ ವಕಾಲತ್ತು ವಹಿಸಿ ಬೆಳ್ಳಿಯನ್ನು ತನ್ನತ್ತ ಸೆಳೆದುಕೊಳ್ಳಲು ಜೋಗಿಣಿ ಮುರೆಗವ್ವನನ್ನು ಕಳುಹಿಸಿದ್ದನು. ಆಕೆ ಆಸೆಗಳನ್ನು ತೋರಿಸುತ್ತಾ ನೀನು ಒಪ್ಪಿಕೊಂಡರೆ ಗೌಡ ನಿನ್ನನ್ನು ಬಂಗಾರದಲ್ಲಿಯೇ ಮುಳುಗಿಸುತ್ತಾನೆ. ನಿನ್ನ ಎಲ್ಲಾ ಕಷ್ಟಗಳನ್ನು ಹಸನು ಮಾಡುತ್ತಾನೆ ಎನ್ನುವಂತಹ ಮಾತನ್ನಾಡುತ್ತಾಳೆ. ಮೊದಲೇ ಗಂಡನ ತೆಕ್ಕೆಯಿಂದ ದೂರವಿದ್ದವಳು ಜೊತೆಗೆ ಮನೆಯಲ್ಲಿ ತುಂಬಿಕೊಂಡಿದ್ದ ಬಡತನ. ಉಪ್ಪಿದ್ದರೆ ಅಕ್ಕಿ ಇಲ್ಲ, ಅಕ್ಕಿ ಇದ್ದರೆ ಸಕ್ಕರೆ ಇಲ್ಲ ಎನ್ನುವಂತಹ ಪರಿಸ್ಥಿತಿ. ಅಂತಹ ಕಷ್ಟದಲ್ಲೂ ಬೆಳ್ಳಿ ಗರತಿಯಂತಹ ಮಾತುಗಳನ್ನು ಸಂಯಮದಿಂದಲೆ ಮಾತನಾಡಿ ತನ್ನ ಕೋಪವನ್ನು ತೀರಿಸಿಕೊಳ್ಳುತ್ತಾಳೆ. ಈ ಗೌಡ ನನಗೆ ಬೆಳ್ಳಿ ಬಂಗಾರ ಕೊಟ್ಟರೆ ನನ್ನ ಬಡತನ ಹಿಂಗುವುದಿಲ್ಲ ಈ ನರ ಮನುಷ್ಯರು ಕೊಟ್ಟರೆಷ್ಟು ಬಿಟ್ಟರೆಷ್ಟು? ಆ ದೇವರು ಕಣ್ಣು ತೆರೆದು ನನ್ನ ಕಡೆ ನೋಡಿದರೆ ತನ್ನೆಲ್ಲ ಕಷ್ಟಗಳು ನಿವಾರಣೆಯಾಗುತ್ತವೆ ಎಂದು ನುಡಿಯುತ್ತಾಳೆ.

ಬೆಳ್ಳಿಯ ಮಾತುಗಳು ಹೆಣ್ಣಿನ ಗೌರವವನ್ನು ಹೆಚ್ಚಿಸುವಂತಹ ದಾಟಿಯಲ್ಲಿ ಹೇಳಿದ್ದಳು. ಜೋಗಿಣಿ ಮುರೆಗವ್ವ ರಾಮಾಯಣ ಮಹಾಭಾರತದ ಕಥೆಗಳನ್ನೂ ನಿದರ್ಶನವಾಗಿ ಕೊಡುತ್ತಾ ತನ್ನತ್ತ ಸೆಳೆಯಲು ನೋಡಿ ವಿಫಲವಾಗಿ ರೋಷದಿಂದ ಮಾತನಾಡಿ ಬೆದರಿಕೆಯನ್ನು ಸಹ ಹಾಕಿಹೋದಳು. ಇದ್ಯಾವುದರ ಬಗ್ಗೆ ಹೆಚ್ಚಿನ ತಲೆಕೆಡಿಸಿಕೊಳ್ಳದೆ ತಾನು ತನ್ನ ಮನೆ ಸಂಸಾರ ಎಂಬಂತ ತನ್ನ ನೋಟವನ್ನು ಬೀರಿದ್ದಳು.

ಬೆಳ್ಳಿ ತನ್ನ ಬದುಕನ್ನು ಸುಗಮವಾಗಿ ಕಳೆಯಬೇಕೆಂದಿದ್ದಳು. ದೇವರು ತನ್ನ ಭಕ್ತರನ್ನು ಪರೀಕ್ಷಿಸುವ ಹಾಗೆ ಬೆಳ್ಳಿಗೆ ಹಲವಾರು ಪರೀಕ್ಷೆಗಳು ಎದುರಾದರು ಅವೆಲ್ಲವುಗಳನ್ನು ಮೆಟ್ಟಿ ನಿಲ್ಲುತ್ತಾಳೆ. ಹೆಣ್ಣೆಂದರೆ ಬೆಳ್ಳಿಯ ಹಾಗೆ ಇರಬೇಕೆಂದು ಬಾಳಿ ತೋರಿಸುತ್ತಾಳೆ. ಇಡೀ ಮನೆತನದ ಜವಬ್ದಾರಿಯನ್ನು ಹೆಗಲಿಗೇರಿಸಿಕೊಂಡು ದಿಟ್ಟತನದಿಂದ ಬಾಳ್ವೆಯನ್ನು ನಡೆಸುತ್ತಾಳೆ.

# ಅಧ್ಯಾಯ-೮

## ಸಮಾರೋಪ

'ಮಾತೃದೇವೋಭವ' ಎಂದು ಹೇಳಿ ತಾಯಿಗೆ ಮೊದಲ ಸ್ಥಾನವನ್ನು ನೀಡಿ ಗೌರವಿಸುವ ಭೂಮಿ ನಮ್ಮದು. ಹಾಗೆಯೇ ವಾಲ್ಮೀಕಿ ಮಹರ್ಷಿಗಳು ರಾಮನ ಮೂಲಕ 'ಜನನೀ ಜನ್ಮಭೂಮಿಶ್ಚ ಸ್ವರ್ಗಾದಪಿ ಗರೀಯಸಿ' ಎಂದು ಹೊಗಳಿದ ಬೀಡು ನಮ್ಮದು. ಇಂದಿನ ಜಾಗತಿಕ ಪ್ರಪಂಚದಲ್ಲಿ ಸ್ತ್ರೀವಾದ, ಮಹಿಳಾ ಶೋಷಣೆ, ಹೆಣ್ಣಿನ ವಿಮೋಚನೆ ಇವೆಲ್ಲವು ಪ್ರಸ್ತುತವಿವೆ. ಹೀಗಿದ್ದರೂ ಸಹ ಭಾರತಾಂಬೆಯು ನೆಲೆಸಿರುವ ಭಾರತದಲ್ಲಿ ಇಂದು ಹೆಣ್ಣು ಅತ್ಯಂತ ಕೆಳ ಅವಸ್ಥೆಗೆ ತಲುಪಿರುವುದು ವಿಪರ್ಯಾಸವಾಗಿದೆ.

ಹೆಣ್ಣು ತನ್ನ ಇಡೀ ಬದುಕಿನಲ್ಲಿ ದ್ವಿತೀಯ ವರ್ಗದ ಪ್ರಜೆಯಾಗಿ, ಕಾಮದ ವಸ್ತುವಾಗಿ, ಮಕ್ಕಳನ್ನು ಹೆರುವ ಯಂತ್ರವಾಗಿ ನಾಲ್ಕು ಗೋಡೆಗಳ ಒಳಗೆ ಬಂಧಿಯಾಗಿ ದಾಸ್ಯ ವೃತ್ತಿಯನ್ನು ಹೊಂದಿರುವುದು ಸಾಮಾನ್ಯ ಸಂಗತಿಯಾಗಿದೆ. ಹೆಣ್ಣಿಗೆ ಸ್ವತಂತ್ರವಾದ ವ್ಯಕ್ತಿತ್ವ, ಸ್ವತಂತ್ರ ಆಸೆ, ಆಕಾಂಕ್ಷೆಗಳು ಇಲ್ಲವಾಗಿದೆ. ಬಂಧನಗಳಿಂದ ಹೊರಬರಲು ಸಾಧ್ಯವಾಗುತ್ತಿಲ್ಲ. ಆದರೆ ಕಾಲ ಬದಲಾಗಿದ್ದು ಈಕೆಯ ನಿರಂತರ ಹೋರಾಟದ ಫಲವಾಗಿ ಇಂದು ಆರ್ಥಿಕವಾಗಿ, ಸಾಮಾಜಿಕವಾಗಿ, ಸಾಹಿತ್ಯವಾಗಿ ಹಾಗೂ ಶೈಕ್ಷಣಿಕವಾಗಿ ಸ್ವಲ್ಪ ಮುನ್ನೆಡೆದಿರಿವುದು ಗಮನಾರ್ಹ ಸಂಗತಿ.

ಸಾಹಿತ್ಯ ಕ್ಷೇತ್ರದಲ್ಲಿ ಪ್ರಸಿದ್ಧಿಯನ್ನು ಹೊಂದುತ್ತ ಹೊಸ ತುಡಿತಗಳಿಗೆ ಕಾರಣ ಳಾಗುತ್ತಿರುವ ವಿಚಾರ ಮೆಚ್ಚಬೇಕಾದ ಸಂಗತಿ. ಹೆಣ್ಣು ಬದಲಾವಣೆಗಳಿಗೆ ಶ್ರಮಿಸುತ್ತಿದ್ದಾಳೆ. ಈ ನೆಲೆಯಲ್ಲಿ ಆಧುನಿಕ ಕನ್ನಡ ಸಾಹಿತ್ಯದಲ್ಲಿ ಮಹಿಳಾ ಶೋಷಣೆಯನ್ನು, ದಲಿತ ಬಂಡಾಯದ ಪ್ರಜ್ಞೆಗಳನ್ನು ಮೈಗೂಡಿಸಿಕೊಂಡು ಗಟ್ಟಿಯಾದ ಧ್ವನಿಯನ್ನು ಮಾಡಿರುವವರು ಮತ್ತು ಮಾಡುತ್ತಿರುವವರು ಗೀತಾ ನಾಗಭೂಷಣ್‌ರವರು. 'ಜಾಗತೀಕರಣ' 'ಖಾಸಗೀಕರಣ' ಮತ್ತು 'ಉದಾರೀಕರಣ'ಗಳಿಂದ ದಲಿತರ ಬದುಕು ಮುಳುಗುವ ಅಪಾಯವಿದೆ ಹಾಗೂ ನಮ್ಮ ಸಾಂಸ್ಕೃತಿಕ, ಪ್ರಾದೇಶಿಕ ಜೀವನವೂ ಅಳಿಯುವ ಸಾಧ್ಯತೆಯಿದೆ. ಹೀಗೆಯೇ ಮುಂದುವರೆದರೆ ಮುಂದೊಂದು ದಿನ ದೇಶವನ್ನೇ ಹರಾಜಿಗಿಡುವ ಸಾಧ್ಯತೆಯನ್ನು ತಳ್ಳಿ ಹಾಕುವಂತಿಲ್ಲ ಎನ್ನುವ ಗೀತಾ ನಾಗಭೂಷಣ್‌ರ ಪ್ರತಿಕಿಯೆಯಲ್ಲಿ ಅರ್ಥವಿಲ್ಲದೇ ಇಲ್ಲ.

ಪ್ರಸ್ತುತ 'ಬದುಕು' ಕಾದಂಬರಿ ಕನ್ನಡ ಮಹಿಳಾ ಸಾಹಿತ್ಯ ಲೋಕದಲ್ಲಿ ಪ್ರಧಾನವಾದ ಸ್ಥಾನವನ್ನು ಹೊಂದಿರುವ ಗೀತಾನಾಗಭೂಷಣ್‌ರವರು ಹೆಸರಾಂತ ಲೇಖಕರು. ಇವರ ಹಲವಾರು ಕಾದಂಬರಿಗಳು ಓದುಗ ಸಹೃದಯ ವರ್ಗದಲ್ಲಿ ವಿಶಿಷ್ಟವಾದ ಸ್ಥಾನಮಾನಗಳನ್ನು ಪಡೆದಿವೆ. ಇವರ ಮಹತ್ವದ ಕಾದಂಬರಿಗಳಲ್ಲಿ 'ಬದುಕು' ಕಾದಂಬರಿಯೂ ಕೂಡ

ಒಂದಾಗಿದ್ದು ಇದು ಸಾಮಾಜಿಕ ಮೌಲ್ಯಗಳ ಬಗೆಗೆ, ದಲಿತ ಹೆಣ್ಣು ಮಕ್ಕಳ ಬಗೆಗೆ, ಬಡವರು, ನಿರ್ಗತಿಕರ ಬಗೆಗೆ ಕಥೆಯನ್ನು ಹೇಳುತ್ತಿದ್ದರೂ ಇಲ್ಲಿ ಹೆಣ್ಣನ್ನು ಯಾವ ರೀತಿಯಾಗಿ ಸಮಾಜ ನಡೆಸಿಕೊಳ್ಳುತ್ತಿದೆ ಎಂಬುದನ್ನು ಸಹ ಸೂಕ್ಷವಾಗಿ ಕಾದಂಬರಿ ಬಿಂಬಿಸುತ್ತದೆ.

'ಬದುಕು' ಕಾದಂಬರಿಯು ತನ್ನದೆ ಆದ ಜಗತ್ತನ್ನು ರೂಪಿಸಿಕೊಳ್ಳಲು ಆಯ್ಕೆ ಮಾಡಿಕೊಂಡಿರುವ ವಸ್ತುವಿನಲ್ಲಿರುವ ನಾವೀನ್ಯತೆಯೇ ಕಾರಣವಾಗಿದೆ. ಈ ಕಾದಂಬರಿಯಲ್ಲಿರುವ ಭಾಷೆಯು ವಿಭಿನ್ನವಾಗಿದೆ. ಗುಲ್ಬರ್ಗಾದ ಗ್ರಾಮೀಣ ಪರಿಸರದಲ್ಲಿ ಬೆಳೆದು ಅದೇ ಬದುಕಿನಲ್ಲಿಯೇ ಮಿಂದೆದ್ದು ಅಲ್ಲಿನ ಆಡುಭಾಷೆಯ ಜನಪದೀಯ ಸಂಸ್ಕೃತಿಯ ನೆಲೆಗಟ್ಟಿನಲ್ಲಿಯೇ ಮೂಡಿಸಿದ್ದಾರೆ. ಆದುದರಿಂದ 'ಬದುಕು' ಕಾದಂಬರಿಯೂ ಭಾಷಾ ವೈಶಿಷ್ಟ್ಯದಲ್ಲಿ ಪ್ರತ್ಯೇಕವಾದಂತಹ ಸ್ಥಾನವನ್ನು ಕಲ್ಪಿಸಿಕೊಂಡಿದೆ. ಉತ್ತರ ಕರ್ನಾಟಕದ ಭಾಷಾ ವೈವಿಧ್ಯತೆಯನ್ನು ಬಿಂಬಿಸುವ ಕನ್ನಡಿಯಾಗಿದೆ. ಪಾತ್ರಗಳ ಚಿತ್ರಣವೂ ಕೂಡ ಓದುಗರ ಮುಂದೆಯೇ ಎಲ್ಲವನ್ನೂ ತಂದಿರಿಸುತ್ತದೆ.

ಕೆಳವರ್ಗದವರ ಸುಖ-ದುಃಖ, ಕಾಮ-ಪ್ರೇಮ, ಲೈಂಗಿಕತೆಯನ್ನು ಸಹಜವೆಂಬಂತೆ ಚಿತ್ರಿಸಿದ್ದಾರೆ. ಗಂಡು-ಹೆಣ್ಣಿನ ಸಂಬಂಧಗಳನ್ನು, ಸಂಪ್ರದಾಯಗಳನ್ನು ಶೋಷಣೆಗಳನ್ನು, ಹಬ್ಬ ಹರಿದಿನಗಳನ್ನು, ಮಾಂಸದ ಅಡುಗೆಗಳನ್ನು, ಹೆಣ್ಣು-ಗಂಡು ಇಬ್ಬರು ಸಿಂಧಿ ಕುಡಿಯುವುದನ್ನು ಸಹಜವೆಂಬಂತೆ ಕಥೆಯ ಅವಿಭಾಜ್ಯ ಅಂಗಗಳನ್ನಾಗಿ ಮೂಡಿಸಿರುವುದು ಗಮನಾರ್ಹವಾದುದಾಗಿದೆ.

ಬದುಕನ್ನು ಶೋಧಿಸುವುದೇ 'ಬದುಕು'. ಲೋಕವು ಬರಿಯ ಲೋಕ ಮಾತ್ರ, ಅದರ ಪೂರ್ವದಲ್ಲಿ ಮಾನವ ಸೇರಿದಾಗ ಮಾತ್ರ 'ಮಾನವಲೋಕ' ಎಂದೆನಿಸುವುದು. ಆದರೂ ಈ ಲೋಕವೆಂಬುದು ಕೇವಲ ಅಪೂರ್ಣ. ಇದು ಎಲ್ಲಿಯವರೆಗೂ ಅಪೂರ್ಣವಾಗಿಯೇ ಉಳಿಯುವುದೆಂದರೆ, ಈ ಮಾನವ ಲೋಕದಲ್ಲಿ ಎಲ್ಲಿಯವರೆಗೂ ಬದುಕು ಅಥವಾ ಬದುಕಿನ ಶೋಧಕ್ರಿಯೆ ನಡೆಯುವುದಿಲ್ಲವೋ ಅಲ್ಲಿಯವರೆಗೂ ಬರಿಯ ಲೋಕಮಾತ್ರವೆನಿಸಿ ಉಳಿಯುವುದು. ಈ ರೀತಿಯ ಬದುಕಿನ ಶೋಧವೇ ಗೀತಾ ನಾಗಭೂಷಣ ಅವರ 'ಬದುಕು' ಕಾದಂಬರಿಯಾಗಿದೆ. ಯಾವ ಜನರಿಗೆ ಬದುಕೆಂಬುದು ಕಷ್ಟವೋ ಅಂತಹ ಜನರ ಬದುಕಿನ ಅನಂತ ಶೋಧವನ್ನು ನಡೆಸುವುದೇ 'ಬದುಕು' ಕಾದಂಬರಿ. ಈ ಶೋಧನೆಯಲ್ಲಿ ಬದುಕು ಸಿಗಬಹುದು, ಸಿಗದೆಯೂ ಇರಬಹುದು. ಆ ಶೋಧನೆಯನ್ನು ಮಾಡುವುದೇ 'ಬದುಕು'.

ಇಲ್ಲಿನ ಪತರೂನ ಪಾತ್ರ ಜಾತಿ ವ್ಯವಸ್ಥೆಯನ್ನು ಮೀರಿ ನಿಂತರೆ ಉಳಿದ ಸ್ತ್ರೀ ಪಾತ್ರಗಳು ವಿಶಿಷ್ಟತೆಯನ್ನು ಪಡೆದಿದೆ. ಈರಮ್ಮ, ನಾಗವ್ವಾಯಿ, ನೀಲಮ್ಮ ಮೊದಲಾದ ಪಾತ್ರಗಳು ಬದುಕಿಗಾಗಿ ತೋರುವ ಆಸಕ್ತಿ, ನಿಷ್ಠೆಗಳು, ಸಮಸ್ಯೆಗಳನ್ನು ಎದುರಿಸುವ ಗಟ್ಟಿತನ ಮನಸ್ಸಿನಲ್ಲಿ ಸ್ಥಿರವಾಗಿ ಬೇರೂರುತ್ತವೆ. ಸ್ತ್ರೀ ಸ್ವಾತಂತ್ರ್ಯ, ಬಂಡಾಯದ ಧ್ವನಿಗಳ ಚಿತ್ರಣಗಳು ವಾಸ್ತವತೆಯನ್ನು ತಂದುಕೊಡುತ್ತವೆ.

'ಬದುಕು' ಕಾದಂಬರಿಯು ಹೆಣ್ಣಿನ, ದಲಿತ ಸಮುದಾಯದವರ ಜೀವನದ ಮೌಲಿಕ ಕಾದಂಬರಿಯಾಗಿದೆ. ಬದುಕು ಕಾದಂಬರಿ ಕೇವಲ ಒಂದು ಹೆಣ್ಣಿನ ಕಥೆಯನ್ನು ಬಿಂಬಿಸುವ ಕಾದಂಬರಿಯಲ್ಲ. ಪುರುಷ ಪ್ರಧಾನ ಸಮಾಜದಲ್ಲಿ ಸಂಪ್ರದಾಯದ ಹೆಸರಿನಲ್ಲಿ ಆಚರಿಸುವ ಹಾಗೂ ಮೌಢ್ಯತೆಯ ಹೆಸರಿನಲ್ಲಿ ಮೇಲ್ವರ್ಗದ ಪುರುಷರಿಗೆ ತನ್ನ ಬದುಕನ್ನು ತೆತ್ತುಕೊಳ್ಳುವ ಅಮಾನವೀಯವಾದ ಕಥಾನಕ ಬದುಕಾಗಿದೆ. ಮಾನವನ ಬದುಕು ಹಲವು ವರ್ಣರಂಜಿತ ಅವಕಾಶಗಳ ಆಗರ. ಆದರೆ ಬದುಕು ಕಟ್ಟಿಕೊಳ್ಳುವುದೇ ಕಷ್ಟ ಸಾಧ್ಯವಾದ ಉತ್ತರ ಕರ್ನಾಟಕದ ಜನರ ನಡುವೆ ನೋವಿನ ಬದುಕು ಸಾಗಿಸುವ ಹೆಣ್ಣಿನ ಆರ್ತನಾದ ಬದುಕಿನಲ್ಲಿ ಪ್ರತಿಧ್ವನಿಸಿದೆ. ನಿಜ: ಬದುಕು ಜಟಕಾ ಬಂಡಿ ವಿಧಿ ಅದರ ಸಾಹೇಬ...... ಆದರೆ ಹೆಣ್ಣಿನ ಬದುಕಿನ ಜಟಕಾ ಬಂಡಿಯ ಸಾಹೇಬ ದೌರ್ಜನ್ಯವೆಸಗಿದರೆ ಹೆಣ್ಣಿನ ಬದುಕು ಏನಾಗಬಹುದು ಎಂಬುದರ ಹಲವು ಸೂಕ್ಷ್ಮಗಳನ್ನು ಗೀತಾನಾಗಭೂಷಣ್‌ರವರು ಬಹಳ ಸೊಗಸಾಗಿ ಕಟ್ಟಿಕೊಟ್ಟಿರುವುದು ಅವರ ಸೃಜನಶೀಲ ಬರವಣಿಗೆಗೆ ಸಾಕ್ಷಿಯಾಗಿದೆ. ಗುಲ್ಬರ್ಗಾದ ಗಂಡು ಭಾಷೆಯನ್ನು ಪ್ರಾದೇಶಿಕವಾದ ಮೌಢ್ಯವನ್ನು, ಬಳಸಿಕೊಳ್ಳುತ್ತಲೇ ಹಲವು ಪಾತ್ರಗಳ ಮೂಲಕ ಅದನ್ನು ಹೇಳ ಹೊರಟಿರುವುದು ಅವರ ಕ್ರಿಯಾಶೀಲವಾದ ಬರವಣಿಗೆಗೆ ಪುಟವಿಟ್ಟಂತಿದೆ. ಒಟ್ಟಾರೆ ಬದುಕು ಪ್ರಾದೇಶಿಕ ಮೌಢ್ಯವನ್ನು, ಸ್ತ್ರೀ ಸಂವೇದನೆಯನ್ನು ಬಿಂಬಿಸುತ್ತಿರುವುದು ನಿಜಕ್ಕೂ ಮೆಚ್ಚಬೇಕಾದ ಸಂಗತಿಯಾಗಿದೆ.

## ಅನುಬಂಧ–೧

## ದೇವದಾಸಿ ಪದ್ಧತಿ ನಿಷೇಧ ಕಾಯ್ದೆ ರೂಪುಗೊಂಡ ಹಂತಗಳು

| | |
|---|---|
| ೧೮೯೨ | ಶ್ರೀ ಬೋರಿ ನಂದೀಶ್ವರಸ್ವಾಮಿ ರಥೋತ್ಸವದಲ್ಲಿ ದೇವದಾಸಿ ನರ್ತಕಿಯರು ನರ್ತಿಸುವುದನ್ನು ನಿಷೇಧಿಸಿ ಮೈಸೂರಿನ ಒಡೆಯರಿಂದ ಅಜ್ಞೆ |
| ೧೯೦೯ | ದೇವಾಲಯಗಳಲ್ಲಿ ನಡೆಯುತ್ತಿದ್ದ 'ಗೆಜ್ಜೆಪೂಜೆ'ಯಂಥ ಧಾರ್ಮಿಕ ವಿಧಿಯ ನಿಷೇಧ |
| ೧೯೨೭ | ಹಿಂದೂ ಧಾರ್ಮಿಕ ಮತ್ತು ದಾನದತ್ತಿ ಕಾನೂನಿನ ಕೆಳಗೆ ದೇವಾಲುಗಳಿಗೆ ಬಾಲಕಿಯರನ್ನು ಅರ್ಪಿಸುವ ರೂಢಿ ಶಿಕ್ಷೆಗೆ ಅರ್ಹವಾದುದು ಎಂದು ಘೋಷಣೆ. |
| ೧೯೩೪ | ಮಹಿಳೆಯರನ್ನೂ ದೇವದಾಸಿಯರನ್ನಾಗಿ ಅರ್ಪಿಸುವುದು ಕಾನೂನು ಬಾಹಿರವೆಂದು ಮುಂಬೈ ಸರ್ಕಾರದಿಂದ ಘೋಷಣೆ. |
| ೧೯೪೭ | ಮದ್ರಾಸ್ ಸರ್ಕಾರ ದೇವದಾಸಿ ಸಮರ್ಪಣಾ ನಿಲುಗಡೆ ಶಾಸನ ಜಾರಿ. |
| ೧೯೮೨ | ದೇವದಾಸಿ ಸಮರ್ಪಣಾ ನಿಷೇಧ ಶಾಸನವನ್ನು ಕರ್ನಾಟಕ ಸರ್ಕಾರ ಜಾರಿಗೊಳಿಸಿತು. |

# ಅನುಬಂಧ–೨

## ದೇವದಾಸಿಯರ ಅಭಿವೃದ್ಧಿ ಮತ್ತು ಪುನರ್ವಸತಿಗಾಗಿ ಇರುವ ಸಂಸ್ಥೆಗಳು

೧. ವಿಮೋಚನಾ ದೇವದಾಸಿ ಪುನರ್ವಸತಿ ಸಂಘ

೨. ಕರ್ನಾಟಕ ಅಭಿವೃದ್ಧಿ ನಿಗಮ (ಕರ್ಮಣಿ)

೩. ಮೈಸೂರು ಪುನರ್ವಸತಿ ಸಂಸ್ಥೆ (ಮೈರಾಡ)

## ಪರಾಮರ್ಶನ ಗ್ರಂಥಗಳು:


೧. ಗೀತಾ ನಾಗಭೂಷಣ್-ಬದುಕು: ಲೋಹಿಯಾ ಪ್ರಕಾಶನ.೨೦೦೧

೨. ಹಾಲತಿ ಸೋಮಶೇಖರ : ಮಹಿಳಾ ಚಳುವಳಿ ಮತ್ತು ಸಾಂಸ್ಕೃಕ ಹಿನ್ನಲೆ ವಿಸ್ಮಯ ಪ್ರಕಾಶನ ೨೦೦೭

೩. ಸಾ.ರಾ.ಅಬೂಬಕರ್: ಸಾಹಿತ್ಯ ಸಂಸ್ಕೃತಿ ಮತ್ತು ಮಹಿಳೆ ಕನ್ನಡ ವಿಶ್ವ ವಿದ್ಯಾಲಯ-೨೦೦೭

೪. ಡಾ. ಕಮಲಾ ಹಂಪನಾ: ಬೊಗಸೆ (ಮಹಿಳೆ ಸುತ್ತ-ಮುತ್ತ)ಸಿ.ವಿ.ಜಿ ಪ್ರಕಟಣೆ ೨೦೦೩

೫. ಆಧುನಿಕ ಸಾಹಿತ್ಯ ಭಾಗ-೧ ಬೆಂಗಳೂರು ವಿಶ್ವವಿದ್ಯಾಲಯ

೬. ತ.ಸು. ಶಾಮರಾಯ: ಕನ್ನಡ ಸಾಹಿತ್ಯ ಚರಿತ್ರೆ: ಕನ್ನಡ ಸಾಹಿತ್ಯ ಪರಿಷತ್ತು ೨೦೧೦

೭. ಜಿ.ಎಸ್. ಆಮೂರ: ಕನ್ನಡ ಕಥನ ಸಾಹಿತ್ಯ ಸಣ್ಣಕತೆ: ಪ್ರಿಯದರ್ಶಿನಿ ಪ್ರಕಾಶನ ೨೦೦೩

೮. ಕನ್ನಡ ಸಾಹಿತ್ಯದ ಹಿನ್ನಲೆ ಪ್ರೇರಣೆ ಮತ್ತು ಪ್ರಭಾವ-ಮೈಸೂರು ವಿಶ್ವವಿದ್ಯಾಲಯ ೨೦೦೪

೯. ಎಸ್. ವಿ. ಪ್ರಭಾವತಿ: ಸ್ತ್ರೀವಾದದ ಪ್ರಸ್ತುಕತೆ:, ಭಾರತೀಯ ಸಂಸ್ಕೃತಿ ವಿದ್ಯಾಪೀಠ ೨೦೦೦

೧೦. ವಿಜಯಾ ದಬ್ಬೆ- ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆಯ ಸ್ವರೂಪ.

೧೧. ಎಲ್.ವಿ. ಶಾಂತಕುಮಾರಿ: ಗೀತಾನಾಗಭೂಷಣ್:ಸಪ್ನ ಬುಕ್ ಹೌಸ್-೨೦೧೧

೧೨. ಸಂಪಾದಕರು, ಉಷಾ.ಪಿ.ರೈ, ಕೆ.ಎಂ.ವಿಜಯಲಕ್ಷ್ಮಿ ಲೇಖಲೋಕ-೪ ಮಹಿಳಾ ಸಾಹಿತ್ಯ: ಒಂದು ಆತ್ಮ ಕಥಾನಕ, ಕರ್ನಾಟಕ ಲೇಖಕಿಯರ ಸಂಘ ೨೦೦೩

೧೩. ಪ್ರವೀಣ್ ಫರ್ನಾಂಡಿಸ್ : ೨೧ನೇ ಶತಮಾನದಲ್ಲಿ ಮಹಿಳೆ ಸಮಾನತೆ, ಅಭಿವೃದ್ಧಿ, ಶಾಂತಿ : ಐ.ಬಿ.ಎಚ್ ಪ್ರಕಾಶನ. ೨೦೦೨

೧೪. ಗೀತಾ ನಾಗಭೂಷಣ್ : ದಂಗೆ : ಕನ್ನಡ ಸಾಹಿತ್ಯ ಪರಿಷತ್ತು : ೨೦೧೨

೧೫. ಡಾ॥ ಗಾಯತ್ರಿ ನಾವಡ: ಕರಾವಳಿ ಜನಪದ ಸಾಹಿತ್ಯದಲ್ಲಿ ಸ್ತ್ರೀವಾದ ನೆಲೆಗಳು ಸಿರಿ ಪ್ರಕಾಶನ ೧೯೯೯

೧೬. ಅ.ನ.ಕೃಷ್ಣರಾಯ: ಸಾಹಿತ್ಯ ಮತ್ತು ಯುಗಧರ್ಮ: ಸಾಗರ ಪ್ರಕಾಶನ ೧೯೫೨.

೧೭. ಡಾ.ಕಮಲಾ ಹಂಪನಾ-ವೈಚಾರಿಕ ಪ್ರಬಂಧಗಳು : ಮುಟ ಸಂಖ್ಯೆ-೧೦೧. ಸಪ್ನ ಬುಕ್ ಹೌಸ್-೨೦೧೧

೧೮. ರಾಘವೇಂದ್ರ ರಾವ್ ಎಚ್.ಎಸ್: ಶತಮಾನದ ಸಾಹಿತ್ಯ ವಿಮರ್ಶೆ: ಕರ್ನಾಟಕ ಸಾಹಿತ್ಯ ಅಕಾಡೆಮಿ-೨೦೦೧

